## 'ಸಿದ್ಧಗಂಗಾ' ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು

762. ಶ್ರೀ ಬಿ. ಎಂ. ರಾಮಚಂದ್ರಯ್ಯ,
ಮುಖ್ಯೋಪಾಧ್ಯಾಯರು.
ಗಣೇಶರೂರಲ್ ಹೈಸ್ಕೂಲ್,
ಗೂಳೂರು, ತುಮಕೂರು ತಾ

763. ಶ್ರೀ ಬಿ. ಎಸ್. ಶಿವಣ್ಣ, ಶಿಕ್ಷಕರು,
ಗಣೇಶರೂರಲ್ ಹೈಸ್ಕೂಲ್.
ಗೂಳೂರು, ತುಮಕೂರು ತಾ

764. ಶ್ರೀ ಕೆ. ಎಸ್. ಸದಾಶಿವಯ್ಯ. ಶಿಕ್ಷಕರು.
ಗಣೇಶರೂರಲ್ ಹೈಸ್ಕೂಲ್,
ಗೂಳೂರು, ತುಮಕೂರು ತಾ

765. ಶ್ರೀ ಗುರುಮಲ್ಲಪ್ಪ, ಎಂ.ಎ.ಬಿ.ಇಡಿ
ಸರಸ್ವತಿ ಹಿಂದಿ ವಿದ್ಯಾಮಂದಿರ
ವಿನೋಬನಗರ ತುಮಕೂರು ತಾ

766. ಶ್ರೀ ಎಂ. ಎಸ್. ಸದಾಶಿವಯ್ಯ ಸಂಪಿಗೆ
ತುರುವೇಕೆರೆ ತಾ ತುಮಕೂರು ಜಿಲ್ಲೆ.

767. ಶ್ರೀ ಎನ್. ತಿಮ್ಮಪ್ಪ. ಶಿಕ್ಷಕರು,
ಕೊಡಗೆಹಳ್ಳಿ. ತುರುವೇಕೆರೆ ತಾ
ತುಮಕೂರು ಜಿಲ್ಲೆ

768. ಶ್ರೀ ಕೆ. ಕರಿಬಸಪ್ಪ. ತೊರೆಮಾವಿನಹಳ್ಳಿ
ತುರುವೇಕೆರೆ ತಾ ತುಮಕೂರು ಜಿಲ್ಲೆ

769. ಶ್ರೀ ಕೆ. ಸಿ. ಮಹಾಲಿಂಗಪ್ಪ,
S/o ಶ್ರೀ ಚನ್ನೇಗೌಡ. ಕೊಡಗೆಹಳ್ಳಿ.
ತುರುವೇಕೆರೆ ತಾ ತುಮಕೂರು ಜಿಲ್ಲೆ.

770. ಶ್ರೀ ಕೆ. ಎಲ್. ಬೋರೇಗೌಡ,
S/o ಶ್ರೀ ಲಿಂಗೇಗೌಡ. ಕನತೂರು.
ತುರುವೇಕೆರೆ ತಾ ತುಮಕೂರು ಜಿಲ್ಲೆ

771. ಶ್ರೀ ಗುರುಮಲ್ಲಪ್ಪ S/o ಶ್ರೀ ಗುರುಬಸಪ್ಪ,
ದ್ಯಾವನಹಳ್ಳಿ. ತುರುವೇಕೆರೆ ತಾ
ತುಮಕೂರು ಜಿಲ್ಲೆ.

772. ಶ್ರೀ ಪಂಚಣ್ಣ ಮ[illegible]. ಮಲ್ಲತ್ತಹಳ್ಳಿ.
ಬೆಂಗಳೂರು ಸೌತ್.

773. ಪಟೇಲ್ ಶ್ರೀ ದೊಡ್ಡಮಲ್ಲಪ್ಪ
S/o ಶ್ರೀ ಪುಟ್ಟಮಾದಪ್ಪ, ಮಾದಹಳ್ಳಿ
ನಂಜನಗೂಡು ತಾ ಮೈಸೂರು ಜಿಲ್ಲೆ.

774. ಶ್ರೀ ಎ. ಎಲ್. ನಾಗಣ್ಣ, [illegible]
[illegible] ಮೈಸೂರು.

775. ಶ್ರೀ ಬಿ. ಬಿ. ರಾಜಶೇಖರಯ್ಯ,
ಪ್ರೊ॥ ಲಕ್ಷ್ಮೀವೆಂಕಟೇಶ್ವರ ಆಯಿಲ್ ಮಿಲ್,
ದೊಡ್ಡಬಜಾರ್ ಮೈಸೂರು—12

(... ಮುಂದುವರಿಯುತ್ತದೆ.)



# ಶ್ರೀವಾಣಿ

ಮನೋದೌರ್ಬಲ್ಯ, ಮಾನವನ ಪ್ರಗತಿಯ ಮಹಾ ಶತ್ರು. ಬಹುಮಂದಿ ಮನೋದೌರ್ಬಲ್ಯದಿಂದ ತಮ್ಮ ಭಾವೀಜೀವನವನ್ನು ಹಾಳುಮಾಡಿಕೊಳ್ಳುತ್ತಾರೆ. ಈ ಮನೋದೌರ್ಬಲ್ಯವುಳ್ಳ ವ್ಯಕ್ತಿ ಜೀವನದಲ್ಲಿ ಏನನ್ನೂ ಸಾಧಿಸಲಾರ. ಯಾವ ಗುರಿಯನ್ನೂ ಮುಟ್ಟಲಾರ. ನಾನೊಬ್ಬ ಕೈಲಾಗದವನು, ನನ್ನಿಂದ ಏನೂ ಮಾಡಲು ಸಾಧ್ಯವಿಲ್ಲ ಎಂಬ ಮನುಷ್ಯ ತಾನೂ ಬೆಳೆಯಲಾರ, ತನ್ನ ಪರಿಸರವನ್ನೂ ಬೆಳೆಸಲಾರ. ಆದ್ದರಿಂದ ತಾನು ಬೆಳೆಯಬೇಕು, ಮುಂದುವರಿಯಬೇಕು ಎಂಬ ಇಚ್ಛೆಯುಳ್ಳ ವ್ಯಕ್ತಿ ಇಂಥ ಮನೋ ದೌರ್ಬಲ್ಯವನ್ನು ಬದಿಗೊತ್ತಿ ತಾನು ಕೈಗೊಂಡ ಕಾರ್ಯವನ್ನು ಎಷ್ಟೇ ಎಡರು ತೊಡರುಗಳು ಬಂದರೂ ಎದೆಗುಂದದೆ ಪೂರೈಸಿ ಯಶಸ್ಸನ್ನು ಕಾಣಬೇಕು; ಗುರಿಯನ್ನು ಮುಟ್ಟಬೇಕು. ಈ ಒಂದು ನೀತಿಯನ್ನು ತಿಳಿಸುವ ದೃಷ್ಟಿಯಿಂದಲೇ ಮನುಷ್ಯ ವರ್ಗವನ್ನು ಬಲ್ಲವರು ಮೂರು ವಿಭಾಗ ಮಾಡಿದ್ದಾರೆ. ಕೆಲವರು ಮುಂದೆ ಒದಗಬಹುದಾದ ವಿಘ್ನಗಳಿಗೆ ಮೊದಲೇ ಹೆದರಿ ಕಾರ್ಯವನ್ನೇ ಪ್ರಾರಂಭಿಸುವುದಿಲ್ಲ. ಅಂಥವರು ಕನಿಷ್ಠರು. ಮತ್ತೆ ಕೆಲವರು ಕಾರ್ಯವನ್ನೇನೊ ಉತ್ಸಾಹದಿಂದ ಪ್ರಾರಂಭಿಸುತ್ತಾರೆ. ಆದರೆ ನಡುವೆ ವಿಘ್ನಗಳು ಬಂದಾಗ ಅಷ್ಟಕ್ಕೇ ನಿಲ್ಲಿಸಿಬಿಡುತ್ತಾರೆ. ಇವರು ಮಧ್ಯಮರು. ಮತ್ತೊಂದು ವರ್ಗಉಂಟು—ಯಾರು ತಾವು ಪ್ರಾರಂಭಿಸಿದ ಕಾರ್ಯಕ್ಕೆ ಎಷ್ಟೇ ಅಡ್ಡಿ ಆತಂಕಗಳು ಬಂದು ಎರಗಿದರೂ ಧೈರ್ಯೋತ್ಸಾಹದಿಂದ, ಸ್ಥಿರವಾದ ಮನಸ್ಸಂಕಲ್ಪದಿಂದ ಅವುಗಳೆಲ್ಲವನ್ನೂ ಬಗೆಹರಿಸಿಕೊಂಡು ಕಾರ್ಯವನ್ನು ಪೂರೈಸಿ ಪೂರ್ಣವಾದ ಯಶಸ್ಸನ್ನು ಹೊಂದುತ್ತಾರೆಯೋ ಅಂಥವರು ಮೂರನೆಯ ವರ್ಗಕ್ಕೆ ಸೇರಿದವರು. ಅವರೇ ಉತ್ತಮರು.

ಪ್ರಾರಭ್ಯತೇ ನಖಲು ವಿಘ್ನಭಯೇನ ನೀಚೈಃ
ಪ್ರಾರಭ್ಯ ವಿಘ್ನವಿಹತಾಃ ವಿರಮಂತಿ ಮಧ್ಯಾಃ ॥
ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ
ಪ್ರಾರಬ್ಧಮುತ್ತಮ ಜನಾ ನ ಪರಿತ್ಯಜಂತೇ ॥

# 'ಸಿದ್ಧಗಂಗಾ'

ಜೂನ್ ೧೯೮೦

ಸಂಪುಟ–೧೩ ಸಂಚಿಕೆ–೬




ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10-00** ರೂ

## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೆಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"

"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]

ಶ್ರೀಸಿದ್ಧಗಂಗಾ ಕ್ಷೇತ್ರ–572104 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572104 **ತುಮಕೂರು ಜಿಲ್ಲೆ.**

# ಸಂಪಾದಕೀಯ

ದೇಶದ ಎಲ್ಲ ವಿಧ ಆರ್ಥಿಕ ಅನಾರೋಗ್ಯಕ್ಕೆ ಯೋಗ್ಯ ಶಿಕ್ಷಣದ ಅಭಾವವೇ ಕಾರಣ - ಯೋಗ್ಯ ಹಾಗೂ ಉದ್ದೇಶಿತ ಶಿಕ್ಷಣ ಈ ಅನಾರೋಗ್ಯಕ್ಕೆ ಸಿದ್ಧೌಷಧ. ಪ್ರತಿಯೊಂದು ರಾಷ್ಟ್ರದ ಪ್ರಗತಿಯು ತಾನು ಕೊಡುವ ಶಿಕ್ಷಣ ವನ್ನವಲಂಬಿಸಿದೆ. ಈ ವಿಚಾರದಲ್ಲಿ ಶಿಕ್ಷಕ, ಪೋಷಕ, ವಿದ್ಯಾರ್ಥಿ ಮತ್ತು ಸರಕಾರ ಎಲ್ಲರೂ ಹೊಣೆಗಾರರು.

ದಿನನಿತ್ಯ ಶಿಕ್ಷಕ ಬೆಳಗಿನಿಂದ ಸಂಜೆಯುವರೆಗೆ ಸ್ಕೂಲಿಗೆ ಹೋಗಿ ಪಾಠ ಹೇಳಿಕೊಡುತ್ತಿದ್ದಾನೆ, ಪೋಷಕರು ತಮ್ಮ ಮಕ್ಕಳ ಓದಿಗೆಂದು ಅಧಿಕ ಹಣವನ್ನು ಖರ್ಚುಮಾಡುತ್ತಿದ್ದಾರೆ. ಲಕ್ಷಗಟ್ಟಲೆ ಶಾಲೆಗೆ ಹೋಗಿ ಪರೀಕ್ಷೆಯನ್ನು ಕಟ್ಟಿ ಅಧಿಕಮಂದಿ ವಿದ್ಯಾರ್ಥಿಗಳು ಆಯುಸ್ಸನ್ನ ವ್ಯರ್ಥಮಾಡಿಕೊಳ್ಳುತ್ತಿದ್ದಾರೆ, ಸರಕಾರವೂ ಕೋಟಿ ಕೋಟಿ ಹಣ ಖರ್ಚು ಮಾಡುತ್ತಿದೆ. ಆದರೆ ಫಲಿತಾಂಶ ಹೊರಬಿದ್ದಾಗ, ಶಿಕ್ಷಕರು ನಿರಾಶರಾಗುತ್ತಾರೆ, ಪೋಷಕರು ಪರಿತಪಿಸು ತ್ತಾರೆ, ವಿದ್ಯಾರ್ಥಿಗಳು ಶಕ್ತಿಗುಂದಿದವರಾಗಿ ಸಮಾಜ ಘಾತುಕ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ಸರಕಾರವು ಶಿಕ್ಷಣರಂಗದ ತಲೆಬೇನೆಯಿಂದ ತತ್ತರಿಸತೊಡಗುತ್ತದೆ. ಈ ವಿಧವಾದ ಅವನತಿಗೆ ಕಾರಣವೇನು ? ಯಾರು ? ಎಂದು ಹಲವು ಶಿಕ್ಷಣ ತಜ್ಞರ ಚಿಂತೆಗೆ ಉತ್ತರ ಪರಸ್ಪರ ದೂಷಣೆಯಲ್ಲಿ ಪರ್ಯವಸಾನವಾಗಿದೆ.

ಉಪಾಧ್ಯಾಯನು ತಾನು ಹೇಳಿಕೊಡುತ್ತಿರುವ ಶಿಕ್ಷಣ ಸಫಲವಾಗಬೇಕು, ಕಲಿಸುವ ಕಾರ್ಯ ಸುಗಮ ವಾಗಬೇಕು, ತನ್ನ ವಿದ್ಯಾರ್ಥಿ ಜ್ಞಾನವಂತನಾಗಿ ತನ್ನ ಕೀರ್ತಿಗೌರವಗಳನ್ನು ಬೆಳಗಿಸುವಂತಾಗಬೇಕೆಂಬ ಹಿರಿಯಾಸೆ ಪ್ರತಿಯೊಬ್ಬ ಶಿಕ್ಷಕನಲ್ಲೂ ಮೂಡಿಬರಬೇಕು. ತನ್ನ ಕರ್ತವ್ಯದ ಬಗ್ಗೆ ಪ್ರಜ್ಞೆ ದೃಢವಾಗಿರಬೇಕು. ಇದು ಬಿಟ್ಟು ಬೇರೊಂದು ಕಡೆಗೆ ಬೆರಳು ತೋರಿಸುವುದು ಯುಕ್ತವಲ್ಲ. ಇನ್ನೂ ಪೋಷಕರಾದವರು, ತನ್ನ ಮಕ್ಕಳು ಜಾಣರಾಗ ಬೇಕು, ಕಲಿತು ಬುದ್ಧಿವಂತರಾಗಬೇಕು, ಮನೆತನದ ಗೌರವವನ್ನು ಹೆಚ್ಚಿಸಬೇಕು ಎನ್ನುವ ಹಲವಾರು ಆಸೆಗಳನ್ನಿಟ್ಟು ಕೊಂಡು ತಮ್ಮ ನಡೆ ನುಡಿ ಸಚ್ಚಾರಿತ್ರ್ಯಗಳನ್ನು ಮಕ್ಕಳ ಮುಂದೆ ಪ್ರದರ್ಶಿಸಬೇಕು. ತಂದೆ ತಾಯಿಗಳ ಯೋಗ್ಯ ಆದರ್ಶ ಮಕ್ಕಳ ಮೇಲೆ ಮೊದಲು ಪ್ರಭಾವಿತವಾಗುವ ಅಂಶ. ಆಗಿಂದಾಗ್ಗೆ ತಮ್ಮ ಮಕ್ಕಳ ಪ್ರಗತಿ ನಡೆನುಡಿಯ ಬಗ್ಗೆ ಯೋಗ್ಯ ವಿಚಾರಣೆ ಅಗತ್ಯ. ಇದನ್ನು ಬಿಟ್ಟು ವಿದ್ಯಾ ಹೇಳಿಕೊಡುವ ಮತ್ತು ಶಿಕ್ಷಣ ಕೊಡುವ ಸರಕಾರವನ್ನು ದೂಷಿಸುವುದು ಸರಿಯಲ್ಲ. ವಿದ್ಯಾರ್ಥಿಗಳಲ್ಲಿ, ನಾನು ಕಲಿತು ಜಾಣನಾಗಬೇಕು, ಸಮಾಜದಲ್ಲಿ ಪ್ರತಿಷ್ಠಿತ ಉದ್ಯೋಗ ವನ್ನು ದೊರಕಿಸಿಕೊಂಡು ನೆಮ್ಮದಿಯಿಂದ ಬಾಳಿ ತನ್ನ ಅಭಿವೃದ್ಧಿಗೆ ಕಾರಣ ಕರ್ತರಾದವರಿಗೆಲ್ಲರೂ ಕೀರ್ತಿ ತರುವಂತ ವರಾಗಬೇಕೆಂಬ ಹಂಬಲ ದಿನ ನಿತ್ಯದ ಪಠಣ ಮಂತ್ರವಾಗಬೇಕು. ಇಲ್ಲ ಸಲ್ಲದ ವಿಚಾರಗಳಿಗೆ, ಮತ್ತು ಪರಿಸರ ಪ್ರಭಾವಕ್ಕೊಳಗಾಗದೆ ತನ್ನ ಕರ್ತವ್ಯದ ಬಗ್ಗೆ ನಿರಂತರ ಚಿಂತನೆಯಲ್ಲಿ ತೊಡಗಬೇಕು. ಆದರ್ಶ ವ್ಯಕ್ತಿಯ ನಡೆನುಡಿಯ ಅನುಕರಣೆ ದಿನೇ ದಿನೇ ಅಭಿವೃದ್ಧಿಯಾಗಬೇಕು. ಆಗ ನಮ್ಮ ಉದ್ದೇಶ ಸಫಲವಾಗುತ್ತದೆ. ಎಂದು ಭಾವಿಸಿ ಅಭ್ಯಾಸದಲ್ಲಿ ನಿರತರಾಗಬೇಕು. ಈ ಕಾರ್ಯ ವಿದ್ಯಾರ್ಥಿಯ ಒಂದು ಜವಾಬ್ದಾರಿಯುತವಾದ ಹೊಣೆಗಾರಿಕೆ. ಯೋಗ್ಯ ಶಿಕ್ಷಣಕ್ಕಾಗಿ, ದೇಶದ ಮಕ್ಕಳಿಗೆ ಯೋಗ್ಯ ಶಿಕ್ಷಣ ಸಿಗಬೇಕು. ಆದ್ದರಿಂದ ಸುಜ್ಞಾನಿಗಳೂ, ಸುವಿಚಾರಿಗಳೂ ಆದ ಪ್ರಜಾ ಕೋಟಿ ನಿರ್ಮಾಣವಾಗಬೇಕು, ರಾಷ್ಟ್ರದ ಘನತೆ ಗೌರವಗಳು ಹೆಚ್ಚಬೇಕೆಂದು. ಸರಕಾರದ ಸದಿಚ್ಛೆ ಯಾಗಬೇಕು. ಹಾಗಾದಾಗ ಮಾತ್ರದೇಶದ ಪ್ರಗತಿ ಸಾಧ್ಯವಾದೀತು.

# ಅಮೃತ ಬಿಂದು

ಸಮಾಜದಲ್ಲಿ ಸಾಮಾನ್ಯವಾಗಿ ಮೂರು ಮುಖ್ಯ ಸ್ವಭಾವದ ಜನರನ್ನು ಕಾಣುತ್ತೇವೆ. ಒಂದು ಕಾರ್ಯಕದ ಆರಂಭ ಕಾಲದಲ್ಲಿಯೇ ಮುಂದೆ ಬರುವ ವಿಘ್ನಗಳ ಭಯವನ್ನು ಕುರಿತು ಯೋಚನೆಮಾಡುತ್ತಾರೆ. ವಿಘ್ನಗಳ ಜೊತೆಯಲ್ಲಿ ಹೋರಾಟ ಮಾಡುವ ಶಕ್ತಿಯಿಲ್ಲದೆ ಕಾರ್ಯವನ್ನು ಪ್ರಾರಂಭ ಮಾಡುವುದೇ ಇಲ್ಲ. ಇಂತಹವರು ಕನಿಷ್ಠವರ್ಗದವರು. ಮತ್ತೊಂದು ಗುಂಪಿನವರು ಕಾರ್ಯವನ್ನು ಆರಂಭಿಸಿಬಿಡುತ್ತಾರೆ. ಮಧ್ಯೆ ಏನಾದರೂ ತೊಂದರೆ ಅಡ್ಡಬಂದರೆ ಆ ಕಾರ್ಯಕ್ಕೆ ತಿಲಾಂಜಲಿ ನೀಡಿ ಸುಮ್ಮನಾಗಿಬಿಡುತ್ತಾರೆ. ಆ ಕಾರ್ಯವನ್ನು ಅಲ್ಲಿಗೆ ನಿಲ್ಲಿಸಿಬಿಡುತ್ತಾರೆ. ಇವರು ಮಧ್ಯಮ ವರ್ಗದವರು. ಮೂರನೆಯ ವರ್ಗದವರು ಒಂದು ಕಾರ್ಯವನ್ನು ಆರಂಭಿಸಬೇಕಾದ ಯುಕ್ತಾಯುಕ್ತತೆಯನ್ನು ಕುರಿತು ಮೊದಲು ಆಲೋಚಿಸುತ್ತಾರೆ. ಅನಂತರ ಆ ಕಾರ್ಯವನ್ನು ಆರಂಭಿಸಿದ ಮೇಲೆ ಎಂತಹ ಅಡ್ಡಿ ಅಡಚಣೆಗಳು ಬಂದರೂ ಕಾರ್ಯವನ್ನು ಮುಕ್ತಾಯ ಮಾಡುತ್ತಾರೆ. ಅದು ಎಷ್ಟೇ ದೊಡ್ಡದಿರಲಿ, ಜಟಿಲವಾಗಿರಲಿ, ಸಮಸ್ಯೆಯಿಂದ ಕೂಡಿರಲಿ ಪೂರ್ಣಮಾಡುತ್ತಾರೆ, ಗಾಬರಿಗೊಳ್ಳದೆ ಶಾಂತರಾಗಿರುತ್ತಾರೆ. "ಮಹಾರಂಭಾಃ ಕೃತಧಿಯಃ ತಿಷ್ಠಂತಿ ಚ ನಿರಾಕುಲಾಃ"। ಉತ್ತಮರ ಸ್ವಭಾವವೇ ಹೀಗೆ.

—ದುಂಬಿ

# ನವನೀತ

**ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರ ವಿರೋಧಿನಾ।**
**ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ॥**

ಋಷಿಗಳ ಮಾತನ್ನೂ ಧರ್ಮೋಪದೇಶವನ್ನೂ ವೇದಗಳಿಗೂ, ಶಾಸ್ತ್ರಗಳಿಗೂ ವಿರೋಧವಿಲ್ಲದಂತೆ ಯಾರು ತರ್ಕಮಾಡಿ ತಿಳಿಯುತ್ತಾನೆಯೋ ಅವನೇ ಧರ್ಮವನ್ನು ಚೆನ್ನಾಗಿ ಬಲ್ಲವನು.

**—ಮನುಸ್ಮೃತಿ**

  

**ಬಹುಮಾಯಾ ಸಮಾಕೀರ್ಣಃ ನಾನಾದೋಷಸಮಾಕುಲಃ।**
**ಲುಪ್ತಧರ್ಮ ಕ್ರಿಯಾಚಾರಃ ಘೋರಃ ಕಾಲೋಭವಿಷ್ಯತಿ॥**

ಮುಂದಿನ ಕಾಲವು ನಾನಾವಿಧವಾದ ಮೋಸಗಳಿಂದ ಕೂಡಿ ಮತ್ತಷ್ಟು ಭಯಂಕರವಾಗಿರುತ್ತದೆ. ನಾನಾ ವಿಧವಾದ ದೋಷಗಳು ಬೆಳೆದು ನಿಂತು, ಧರ್ಮವೂ ಆಚಾರವೂ ಲುಪ್ತವಾಗುವುದು.

**—ಮಹಾಭಾರತ**

  

**ಜಲಬಿಂದು ನಿಪಾತೇನ ಕ್ರಮಶಃ ಪೂರ್ಯತೇ ಘಟಃ।**
**ಸ ಹೇತುಃ ಸರ್ವವಿದ್ಯಾನಾಂ ಧರ್ಮಸ್ಯಚ ಧನಸ್ಯಚ॥**

ನೀರಿನ ಒಂದೊಂದು ಹನಿಯೂ ಕ್ರಮವಾಗಿ ಬೀಳುವುದರಿಂದ ಮಡಕೆಯು ತುಂಬುತ್ತದೆ. ಎಲ್ಲ ವಿದ್ಯೆಗಳಿಗೂ ಧರ್ಮಕ್ಕೂ ಹಣಕ್ಕೂ ಕ್ರಮವಾಗಿ ತುಂಬುವುದೇ ಕಾರಣ.

**—ಹಿತೋಪದೇಶ**

  

( ಮುಂದುವರಿದ ಲೇಖನ )

# ಶ್ರೀ ಸಿದ್ಧಗಂಗಾ ಕ್ಷೇತ್ರ : ಪರಿಸರ ಮತ್ತು ಇತಿಹಾಸ

**—ಚನ್ನಪ್ಪ ಎರೇಸೀಮೆ**

### ಹರದನ ಹಳ್ಳಿ ಮತ್ತು ಅಲ್ಲಿನ ಮಠ :—

ಪ್ರಾಚೀನ ಕರ್ನಾಟಕದ ವ್ಯಾಪಾರವು ವೀರ ಬಣಜುಗಳೆಂದು ಕರೆಯಿಸಿಕೊಳ್ಳುವ ಒಂದು ಮಹಾ ಸಂಘಕ್ಕೆ ಒಳಪಟ್ಟದಾಗಿತ್ತು. ಈ ಮಹಾ ಸಂಘದ ಮೂಲ ಕೇಂದ್ರ ಐಹೊಳೆ (ಅಯ್ಯಾವಳೆ) ಪಟ್ಟದಕಲ್ಲು ಎಂಬ ಊರುಗಳಲ್ಲಿತ್ತು. ಈ ಬಣಜುಗಳಲ್ಲಿ ಮಹಾನಾಡಸೆಟ್ಟಿ, ವಾಲಿಸೆಟ್ಟಿ, ಪಟ್ಟಣಸೆಟ್ಟಿ, ಗುಡಾರದಸೆಟ್ಟಿ, ಬಣಕಾರಸೆಟ್ಟಿ, ಗುಣಹಾರಿಸೆಟ್ಟಿ, ಇತ್ಯಾದಿ ನಾಮಾಂತರಗಳುಂಟು. ಇವರು ಸಾಮಾನ್ಯವಾಗಿ ಧರ್ಮ ನಿಷ್ಠರು, ಧರ್ಮ ಸಂರಕ್ಷಕರು, ಎತ್ತುಗಳಮೇಲೆ ಕಂಟಲಿಗಳನ್ನು ಏರಿಕೊಂಡು ಊರಿಂದೂರಿಗೆ ಸಾಗಿ ವ್ಯಾಪಾರ-ಮಾಡುತ್ತಿದ್ದರು. ಹೆಸರುಗಳೇ ಹೇಳುವಂತೆ ವಿವಿಧ ವ್ಯಾಪಾರಗಳಲ್ಲಿ, ಇವರೆಲ್ಲ ವ್ಯವಹರಿಸುತ್ತ ಕುಟುಂಬ ರಕ್ಷಣೆ ಗುರುಲಿಂಗ ಜಂಗಮ ಸೇವಾ ಕಾರ್ಯಗಳನ್ನು ಮಾಡುತ್ತಿದ್ದರು. ಒಳನಾಡಿನ ವ್ಯವಹಾರವೆಲ್ಲ ಆ ಕಾಲದಲ್ಲಿ ಎತ್ತಿನ ಮೇಲೆ ಹೇರಿನ ಹೇರುಗಳ ಮೂಲಕವೇ ಸಾಗುತ್ತಿತ್ತು.

ಇಂತಹ ಕಂಟಲಿ ವ್ಯಾಪಾರದ ವೀರ ಬಣಜುಗಳು ಮಧುರೆಗೆ ಹೋಗಿ ಬರುವ ಮಾರ್ಗದಲ್ಲಿ ಈಗಿನ ಚಾಮರಾಜನಗರ ತಾಲ್ಲೂಕು ಹರದನಹಳ್ಳಿ ಎಂದು ಹೇಳಿಸಿಕೊಳ್ಳುವ ಒಂದು ನಗರವನ್ನು ಕಟ್ಟಿಸಿದರು ಇಲ್ಲಿ ತೃಣಜಲ ಸಂಮೃದ್ಧಿಯಾಗಿತ್ತು. ಇದಕ್ಕೆ ಹರದನಹಳ್ಳಿ ಎಂದೂ ಸಂಸ್ಕೃತದಲ್ಲಿ ವಾಣಿಜ್ಯಪುರವೆಂದು ಕರೆದರು. ಅಲ್ಲಿ ಅವರು ಒಂದು ದೇವಾಲಯವನ್ನು ಕಟ್ಟಿಸಿ ಅದರಲ್ಲಿ ಅಮೃತೇಶ್ವರ ಲಿಂಗವನ್ನು ಪ್ರತಿಸ್ಠಾಪಿಸಿದರು. ಅದೇ ಮುಂದೆ ದಿವ್ಯಲಿಂಗೇಶ್ವರ, ಅಳಿಲೇಶ್ವರ ಇತ್ಯಾದಿ ಹೆಸರಿನಿಂದ ಕರೆಯಿಸಿಕೊಂಡಿತು. 6 ಆ ವೀರ ಬಣಜುಗಳು ದೇವಾಲಯದ ಪಕ್ಕದಲ್ಲಿಯೇ ಒಂದು ಮಠವನ್ನು ಕಟ್ಟಿಸಿ

---

6. ಇಲ್ಲಿ ಶಿವಾಲಯವನ್ನು ಕಟ್ಟಿಸಿ ಲಿಂಗ ಪ್ರತಿಷ್ಠೆಮಾಡಲು ಕಾರಣವಾದ ಒಂದು ಕಥೆ ಸಿದ್ಧೇಶ್ವರ ಪುರಾಣ, ನಿ. ವ. ರತ್ನಾಕರಗಳಲ್ಲಿ ಬಂದಿದೆ. ಆ ಕಥೆ ಹೀಗೆ.

"ಅಡಿಕೆ, ಮೆಣಸು, ಯಾಲಕ್ಕಿ ಮುಂತಾದ ಸರಕುಗಳನ್ನು ಸಾವಿರಾರು ಎತ್ತುಗಳ ಮೇಲೆ ಹೇರಿಕೊಂಡು ಹೋಗುತ್ತಿದ್ದ ಈ ವ್ಯಾಪಾರಿ ಸಂಘವು ತೃಣಜಲ ಕಾಷ್ಟಗಳಿಂದ ಸಂಮೃದ್ಧವಾದ ಈ ಸ್ಥಳದಲ್ಲಿ ಕಂಟಲಿಗಳನ್ನು ಇಳುಹಿ, ಗುಡಾರಗಳನ್ನು ಹೊಡೆದು ತಂಗಿದ್ದರು. ಎತ್ತುಗಳನ್ನು ಮೇಯಲು ಬಿಟ್ಟು ನಂತರ ಸ್ನಾನಾದಿಗಳನ್ನು ಮಾಡಿ ಅಡಿಗೆಮಾಡಲು ಪ್ರಾರಂಭವಾಯಿತು. ಹೂಡಿದ ಹೊಲೆಯ ಗುಂಡುಗಳಲ್ಲಿ ಒಂದು ಗುಂಡಿನಿಂದ ಹಾಲು ಹರಿಯುವುದಕ್ಕೆ ಮೊದಲಾಗಿ ಬೆಂಕಿಯಲ್ಲ ನಂದಿಹೋಗತೊಡಗಿತು. ಈ ಸುದ್ಧಿಯನ್ನು ಹಿರಿಯ ಸೆಟ್ಟಿಗೆ ತಿಳಿಸಿದರು. ಹಿರಿಯ ಸೆಟ್ಟಿಯು ತನ್ನ ಬೀಡಿಕೆಯಲ್ಲಿರುವ ಎಲ್ಲಾ ಸೆಟ್ಟಿರನ್ನು ಕರೆಯಿಸಿ ತೋರಿಸಿ ಮುಂದೇನೆಂದು ಯೋಚಿಸಿದನು, ಅವರೆಲ್ಲ ಸೇರಿ ಹಾಲು ಹರಿಯುತ್ತಿದ್ದ ಗುಂಡನ್ನು ಹೊರತೆಗೆದು ಪರೀಕ್ಷಿಸಿ ಇದು ಗುಂಡಲ್ಲವೆಂದೂ, ಲಿಂಗ ಶಿಲೆಯೆಂದು ಅರಿತು ಆ ಗುಂಡಿಗೆ ಅಮೃತೇಶ್ವರ ಲಿಂಗವೆಂದು ಹೆಸರಿಟ್ಟು ಒಂದು ಶಿವಾಲಯವನ್ನು ನಿರ್ಮಿಸಿದರು. ಅದೇ ಶಿವಲಿಂಗಕ್ಕೆ ಮುಂದೆ ದಿವ್ಯಲಿಂಗವೆಂದು ಹೆಸರಿಟ್ಟು ಅಲ್ಲಿಯೇ ತಮ್ಮ ಸಮಯಾಚಾರಕ್ಕಾಗಿ ಒಂದು ಮಠವನ್ನು ಕಟ್ಟಿಸಿ ತಮ್ಮ ಸಮಯಾಚಾರದ ಪ್ರಭುದೇವರ ಪರಂಪರೆಯಲ್ಲಿ ಗೋಸಲ ಸಿದ್ಧೇಶ್ವರರೆಂಬುವವರನ್ನು ನೇಮಿಸಿ ದೇವಾಲಯ ಮತ್ತು ಮಠಕ್ಕೆ ಭೂಮಿ ಕಾಣಿಕೆಗಳನ್ನು ಮಾಡಿದ್ದರು. ಹೀಗೆ ನಿರಜನ ವಂಶ ರತ್ನಾಕರ ಹೇಳಿದರೆ ಸಿದ್ಧೇಶ್ವರ ಪುರಾಣದಲ್ಲಿ ಕಥೆಯೇನೋ ಇದೇ ಕ್ರಮದಲ್ಲಿ ಬಂದಿದ್ದರೂ ಮಠದಲ್ಲಿ ಸಮಯಾಚಾರಕ್ಕಾಗಿ ನೇಮಿಸಿದ ಸ್ವಾಮಿಗಳ ಹೆಸರು ಹೇಳುವಾಗ ಟಿಪ್ಪಣಿ 5 ರಲ್ಲಿ ಹೇಳಿರುವ ಮೊದಲನೆಯ ಸ್ವಾಮಿಗಳಿಂದಲೇ ಸ್ವಾಮಿಗಳ ಪರಂಪರೆ ಪ್ರಾರಂಭವಾಯಿತೆಂದೂ ಹೇಳಲಾಗಿದೆ. (ಸಂ ೨ ಪ-೩೧-೩೨-೩೩) ಇಲ್ಲಿ ಇನ್ನೊಂದು ಅಂಶವೆಂದರೆ ವೀರಬಣಜುಗಳು ಹರದನಹಳ್ಳಿಯಲ್ಲಿ ಮಠವನ್ನು ಸ್ಥಾಪಿಸಲಿಕ್ಕೆ ಅಲ್ಲಿ ಅನಾದಿಗಣವರ ಎಂಬುವರನ್ನು ಆ ಪೀಠದ ಮೇಲೆ ಕುಳ್ಳಿರಿಸುವುದಕ್ಕೆ ಸಿದ್ದೇಶ್ವರರೇ ಮುಖ್ಯವಾದ ಕಾರಣವೆಂದೂ, ಈ ದಲಿತವರ್ಗದವರ ಹೆಸರು ಪ್ರಭುಸ್ವಾಮಿ ಎಂದು ಇತ್ತೆಂದೂ ಈ ಅನಾದಿ ಗಣವರನಿಗೆ ರೇವಣಸಿದ್ದೇಶ್ವರರೂ ರುದ್ರಮುನಿ ಶಿವಾಚಾರ್ಯರಿಂದ ಷಟ್‌ಸ್ಥಲೋಪದೇಶ ಕೊಡಿಸಿದರೆಂದೂ ಶ್ರೀ ಚೆನ್ನಮಲ್ಲಿಕಾರ್ಜುನರು ಅಭಿಪ್ರಾಯಪಡುತ್ತಾರೆ. [ ರೇ. ಸಿ. ಪೀಟಿಕೆ ಪು XV ] ಈ ವಿಷಯ ಯೋಚಿಸತಕ್ಕದ್ದಾಗಿದೆ. ಹೀಗಾದಾಗ ಆ ಕಾಲದ ಸಾಂಗತ್ಯ ಅಧಿಕವಾಗುತ್ತದೆ.

ಸಮಯಾಚಾರಕ್ಕಾಗಿ ಅಲ್ಲಿ ಪ್ರಭುದೇವರ ಪರಂಪರೆವಿಡಿದು ಜಂಗಮ ಪ್ರಭುವೊಬ್ಬರನ್ನು ನೆಲೆಗೊಳಿಸಿದರು. ಈ ಜಂಗು ಮೂರ್ತಿಗಳೇ ಹರದನಹಳ್ಳಿಯ ಗೋಸಲದೇವರು ಅಂದರೆ ಗೋಸಲ ಸಿದ್ಧೇಶ್ವರ ಸ್ವಾಮಿಗಳು. ಈ ವಿಷಯ ವನ್ನು ಸೂಕ್ಷ್ಮವಾಗಿ ಗ್ರಹಿಸಿದಾಗ ಆಳಿದು ಹೋದ ಶೂನ್ಯ ಸಿಂಹಾಸನಕ್ಕೆ ಪುನಃ ಮೂರ್ತಿ ಸ್ವರೂಪ ಕೊಟ್ಟು ಹರದನಹಳ್ಳಿಯ ಮಠದಲ್ಲಿ ಅದನ್ನು ಪ್ರತಿ ಷ್ಠಾಪಿಸಿದರೆಂಬುದು ಗೊತ್ತಾಗುವುದು. ಆದುದರಿಂದ ಈ ಪೂರ್ವದ ಗೋಸಲ ಸಿದ್ಧೇಶ್ವರರ ಹಿಂದಿನ ೧೧ಜನ ಗುರುಗಳು ನಿರಂಜನ ಜಂಗಮ ಪದವನ್ನು ಹೊಂದಿರ ಲಿಲ್ಲವೆಂದು ತೋರುವುದು. ನಿರಂಜನ ಜಂಗಮಾಧಿಕಾರ ಗೋಸಲ ಸಿದ್ಧೇಶ್ವರರಿಂದಲೇ ಮುಂದುವರಿಯಿತೆಂದೂ ಆದುದರಿಂದಲೇ ಅವರು ತಮ್ಮ ನಿರಂಜನ ಜಗದ್ಗುರು ಸ್ಥಾನಾಪನ್ನರಾಗಿ ಸಂಚಾರ ಕೈಗೊಂಡು ಖಿಲವಾಗುತ್ತ ಬಂದಿದ್ದ ವೀರಶೈವ ಧರ್ಮದ ಪುನರು ದ್ಧಾರದ ಮಹಾಕಾರ್ಯದಲ್ಲಿ ತತ್ಪರರಾಗಿ ಪ್ರಚಾರ ಮಾಡುತ್ತಾ ಶಿವಗಂಗೆ ಅನಂತರ ಸಿದ್ಧಗಂಗೆಗೆ ಬಂದು ಅನೇಕ ವರ್ಷಗಳು ಅನುಷ್ಠಾನಾದಿಗಳನ್ನು ಮಾಡಿ ಮೂಲ ಪೀಠದ ಉತ್ತರಾಧಿಕಾರವನ್ನು ಶಂಕರ ದೇವರು ಅಥವಾ ಶಂಕರಾಚಾರ್ಯರಿಗೆ ವಹಿಸಿ ಇಲ್ಲಿಯೇ ಅಂದರೆ ಸಿದ್ಧಗಂಗೆಯಲ್ಲಿಯೇ ಲಿಂಗೈಕ್ಯರಾದರೆಂದು ಹೇಳಬಹುದು. ಗೋಸಲ ಸಿದ್ಧೇಶ್ವರರು ಲಿಂಗೈಕ್ಯರಾದಮೇಲೆ ಅವರ ಶಿಷ್ಯರಾದ ಶಂಕರಾಚಾರ್ಯರ ಕ್ರಾಂತಿಯು ಇನ್ನೂ ಉಜ್ವಲಗೊಳ್ಳುತ್ತದೆ.

### ಕ್ರಿ.ಶ. ಸುಮಾರು ೧೪೩೩
### ಹರದನಹಳ್ಳಿ ಶಂಕರಾಚಾರ್ಯ ಸ್ವಾಮಿಗಳು

೧೬ ನೆಯ ಪಟ್ಟದ ಈ ಶಂಕರಾಚಾರ್ಯ ಸ್ವಾಮಿ ಗಳವರು ತಮ್ಮ ಗುರುಗಳಾದ ಗೋಸಲ ಸಿದ್ಧೇಶ್ವರರ ಪ್ರವಾಸ ಕಾಲದಲ್ಲಿ ತಮ್ಮ ಹರದನಹಳ್ಳಿಯ ಮಠ ದಲ್ಲಿಯೇ ಲಿಂಗ ಜಂಗಮ ದಾಸೋಹಾದಿಗಳನ್ನು ಮಾಡಿ ಕೊಂಡು ಇದ್ದು ಗುರುಗಳು ಲಿಂಗೈಕ್ಯರಾದಮೇಲೆ ತಮ್ಮ ಶಿವಾನುಭವ ಚರಂತಿಕೆಯ ಪಟ್ಟವನ್ನು ದಿವ್ಯ ಲಿಂಗೇಶ್ವರರೆಂಬುವವರಿಗೆ ಇತ್ತು ತಾವು ಪ್ರವಾಸ ಕೈ ಗೊಳ್ಳುವರು. ಇವರು ತಮ್ಮ ಪ್ರವಾಸದಲ್ಲಿ ಪ್ರಥಮತಃ ಪಂಪಾಕ್ಷೇತ್ರಕ್ಕೆ ಬಂದು ಅಲ್ಲಿ ತಮ್ಮ ಗುರುಗಳವರು ಅನುಸರಿಸಿದ್ದ ಏಕೋತ್ತರ ಶತಸ್ಥಲ ಸಂಕೇತದಲ್ಲಿ ೧೦೧ ವಿರಕ್ತರ ಸಂಪ್ರದಾಯವನ್ನು ಉಂಟುಮಾಡಿದರು. ಅವ ರೆಲ್ಲರಿಗೆ ಷಟಸ್ಥಲ ಜ್ಞಾನೋಪದೇಶವನ್ನಿತ್ತರು. ಅವರಲ್ಲಿ ಮುಖ್ಯರಾದವರೆಂದರೆ ಕರಸ್ಥಲದ ವೀರೊಣ್ಣೊಡೆಯ ವರು, ಕರಸ್ಥಲದ ನಾಗದೇವರು, ಸಪ್ತಕಾವ್ಯದ ಗುರು ಬಸವ ದೇವರು, ಬತ್ತಲೆಯ ದೇವರು, ನಿರ್ವಾಣ ಜೋ ಳೇಶ್ವರರು, ಕಲ್ಲು ಮಠದ ಪ್ರಭುದೇವರು ಇವರೇ ಮೊದ ಲಾದವರು. ಪ್ರೌಢದೇವರಾಯನೂ ಇವರಿಂದ ಉಪ ದೇಶ ಪಡೆದನೆಂದೇ ನಿರಂಜನ ವಂಶ ರತ್ನಾಕರ ಹೇಳು ತ್ತಿದೆ. 7 ಪ್ರೌಢದೇವರಾಯನು ವಿಜಯನಗರದಲ್ಲಿ ಶ್ರೀ ಶಂಕರಾಚಾರ್ಯರ ಸ್ವಾಮಿಗಳವರ ಉತ್ಸವವನ್ನೂ ಅವರಿ ರುವ ೭೨ ಬಿರುದುಗಳ ಸಮೇತ ಮಾಡಿಸಿ, ಅರಮನೆ ಯಲ್ಲಿ ಪೂಜಾದಿಗಳನ್ನು ಮಾಡಿಸಿ, ಅಪಾರಕಾಣಿಕೆ ಯನ್ನರ್ಪಿಸಿದನು. ಸ್ವಾಮಿಗಳು ಆ ದ್ರವ್ಯದಿಂದ ಹೇಮ ಕೂಟದಲ್ಲಿ ಗಣಾರಾಧನೆಯನ್ನು ಮಾಡಿಸಿದರು.8 ಈ ಅಂಶದಿಂದ ವಿಜಯನಗರದಲ್ಲಿ ವೀರಶೈವೋದ್ಧಾರಣದ ಕಾರ್ಯಕಲಾಪಗಳು ಮತ್ತೊಮ್ಮೆ ಬಿರುಸಾಗಿ ನಡೆಯಲು ಹರದನಹಳ್ಳಿಯ ಪೀಠಾಚಾರ್ಯರು ಬಹುಮಟ್ಟಿಗೆ ಕಾರಣ ಕರ್ತರಾದರೆಂಬುದು ಧ್ವನಿತವಾಗುವುದು. ನೂರೊಂದು ವಿರಕ್ತರ ಸಂಪ್ರದಾಯ ವಿಜಯನಗರದಲ್ಲಿ ಬೆಳೆದು ಬಂದ ಬಗೆಗೆ ಅನೇಕ ಊಹಾ ಪೋಹಗಳಿವೆ. ಆದರೆ ಆಗ ವೀರಶೈವ ಪ್ರಪಂಚಕ್ಕೆ ಹರದನಹಳ್ಳಿಯ ಪೀಠದ ಆಸರೆ ಯೇ ಮುಖ್ಯವಾಗಿತ್ತೆಂದೂ ಉಳಿದ ಇನ್ನಿತರ ಕೇಂದ್ರ ಗಳು ರಾಜಕೀಯ ವಿಪ್ಲವದ ಕಾಲ್ತುಳಿತಕ್ಕೆ ಸಿಕ್ಕಿ ಜರ್ಜರಿತ ಗೊಂಡಿದ್ದವೆಂದೂ ಊಹಿಸಬೇಕಾಗಿದೆ.

---

7. ನಿ. ವಂ. ರತ್ನಾಕರ ಹಳಕಟ್ಟಿಯವರ ಪ್ರಕಟಣೆ ಪು. ೩೨ ೩೩.

8. ಈಗಲೂ ಹೇಮಕೂಟದಲ್ಲಿ ವಿರೂಪಾಕ್ಷ ದೇವಾಲಯದಿಂದ ದಕ್ಷಿಣಕ್ಕೆ ತುಂಗಭದ್ರಾ ತೀರದಲ್ಲಿ ಹಾಳುಬಿದ್ದ ಒಂದು ದೊಡ್ಡ ವೀರಶೈವ ಮಠವಿದೆ. ಈಗ ಅದರ ಜೀರ್ಣೋದ್ಧಾರವನ್ನು ಕೊಟ್ಟೂರು ಮಠದ ಶ್ರೀಗಳವರು ಮಾಡುತ್ತಿದ್ದಾರೆ. ಆ ಮಠ ಈಗ ಕೊಟ್ಟೂರುಸ್ವಾಮಿ ಮಠದ ಪರಂಪರೆಗೆ ಸೇರಿದುದೆಂದೂ ತಿಳಿದು ಬರುತ್ತದೆ. ಸಾಕಷ್ಟು ಭವ್ಯವಾಗಿರುವ ಈ ಮಠ ಪಂಪಾಕ್ಷೇತ್ರದಲ್ಲಿದ್ದ ವೀರಶೈವ ಮಠಗಳಲ್ಲೆಲ್ಲಾ ದೊಡ್ಡದೆಂದು ಹೇಳಲಾಗುತ್ತದೆ.

ಹಂಪೆಯಿಂದ ನೇರವಾಗಿ ಶಂಕರಸ್ವಾಮಿಗಳು ಸಂಚಾರ ಕೈಗೊಂಡು ತಮ್ಮ ಪೂಜ್ಯಗುರುಗಳಾದ ಗೋಸಲ ಸಿದ್ಧೇಶ್ವರರು ತಪಸ್ಸುಮಾಡಿ ಪಾವನವನ್ನು ಕಟ್ಟಿಸಿದ ಸಿದ್ಧಗಂಗಾ ಗಿರಿಗೆ ಬಂದು ಅಲ್ಲಿ ಅನೇಕ ವರ್ಷಗಳು ಶಿವಯೋಗಾನುಷ್ಠಾನದಲ್ಲಿ ನಿರತರಾಗಿ, ಆಗಿನ ಪೆನಗುಂಡೆ ನಾಡಿಗೊಳಪಟ್ಟಿದ್ದ ಕೋಟೆಗೆರೆಯ ಸಮೀಪದ ಸಿದ್ಧನ ಬೆಟ್ಟದಲ್ಲಿ ಶಿವಾಧೀನರಾದರು. ಇವರ ಉತ್ತರಾಧಿಕಾರಿಗಳಾಗಿ ಹರದನಹಳ್ಳಿಯ ಶಿವಾನುಭವಚರಂತಿಕೆಯ ಸ್ವಾಮಿಗಳವರಾಗಿದ್ದ ದಿವ್ಯಲಿಂಗೇಶ್ವರರು ತಮ್ಮ ಗುರುವರ್ಗದವರಂತೆ ಪ್ರವಾಸ ಕೈಗೊಂಡಿದ್ದರೂ ಹೆಚ್ಚಿನ ಪ್ರಭಾವಯುತವಾದ ಕಾರ್ಯಗಳೇನು ಅವರಕಾಲದಲ್ಲಿ ಆದಂತೆ ಕಂಡು ಬರುವುದಿಲ್ಲ. ಕೆಲವುಕಾಲ ಈ ಸ್ವಾಮಿಗಳು ತಲಕಾಡಿನ ಸುತ್ತ ಮುತ್ತ ಮಾತ್ರ ಸಂಚರಿಸಿದರು. ಆದರೆ ಇವರು ಮಹಾಪುರುಷರಾಗಿದ್ದ ಹಾಗೆ ಕಂಡುಬರುವುದು. ಅಂಗವಿಕಲರನೇಕರಿಗೆ ಅಂಗಾಂಗಗಳುಂಟಾಗುವ ಪವಾಡವನ್ನು ಎಳಂದೂರಿನಲ್ಲಿ ಮಾಡಿದಹಾಗೂ ಎಳಂದೂರು ತಲಕಾಡುಗಳಲ್ಲಿ ಪರಮತಸ್ಥರೊಡನೆ ವಾದಮಾಡಿ ಅವರನ್ನು ಗೆದ್ದು ಸ್ವಮತೋತ್ಕರ್ಷವನ್ನುಂಟುಮಾಡಿದವರೆಂದೂ ಏನು ಅರಿಯದ ನಿರಕ್ಷರಕುಕ್ಷಿಗಳಿಂದ ವೇದ ಉಪನಿಷತ್ತುಗಳನ್ನು ಹೇಳಿಸಿದರೆಂದೂ ತಿಳಿದು ಬರುವುದು. ಇವರು ತಮ್ಮ ಶಿವಾನುಭವ ಚರಂತಿಕೆಯ ಪಟ್ಟವನ್ನು ಗೋಸಲ ಚೆನ್ನಬಸವ ರಾಜೇಂದ್ರರಿಗೆ ಉಂಟುಮಾಡಿ ತಾವು ಹರದನಹಳ್ಳಿಯಲ್ಲಿಯೇ ಲಿಂಗೈಕ್ಯರಾದರು.[9]

## ಗೋಸಲ ಚನ್ನಬಸವರಾಜೇಂದ್ರ ಸ್ವಾಮಿಗಳು

ಗೋಸಲ ಚನ್ನಬಸವರಾಜೇಂದ್ರ ಸ್ವಾಮಿಗಳು ಹರದನ ಹಳ್ಳಿಯ ನಿರಂಜನ ಜಂಗಮಾಧಿಕಾರ ವಹಿಸಿಕೊಂಡ ತಾರುಣ್ಯದಲ್ಲಿಯೇ ವಿಜಯನಗರದ ಪ್ರೌಢದೇವರಾಯನು ಲಿಂಗೈಕ್ಯನಾದನು. ಅನಂತರ ವೀರಶೈವೋದ್ಧರಣ ಕಾರ್ಯದಲ್ಲಿ ಆಸಕ್ತಿವಹಿಸುವ ಇನ್ನೊಬ್ಬ ರಾಜರು ವಿಜಯನಗರದಲ್ಲಿ ಹುಟ್ಟಲಿಲ್ಲ. ಅಂತೆಯೇ ವೀರಶೈವೋದ್ಧರಣ ಕಾರ್ಯದಲ್ಲಿ ಅತ್ಯಂತ ಮಹಿಮಾಶಾಲಿಗಳಾದ ವ್ಯಕ್ತಿಗಳು ಬೇಕಾಗಿತ್ತು. ಸಮಾಜದ ಪುಣ್ಯವೋ ಎಂಬಂತೆ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಹರದನ ಹಳ್ಳಿಯಲ್ಲಿಯೇ ಜನ್ಮವೆತ್ತಿ ಎಳೆಯ ವಯಸ್ಸಿನಲ್ಲಿಯೇ ಗೋಸಲ ಚನ್ನಬಸವೇಶ್ವರರ ಕೃಪೆಗೆ ಪಾತ್ರರಾದರು. ಇವರಿಗೆ ಬಾಲ್ಯದಲ್ಲಿಯೇ ಗೋಸಲ ಚನ್ನಬಸವೇಶ್ವರರು ಶಿವಾನುಭವ ಚರಂತಿಕೆಯ ಪಟ್ಟಕಟ್ಟಿದರು. 'ಸಿದ್ಧಲಿಂಗೇಶ್ವರ' ಎಂದು ನಾಮಕರಣ ಮಾಡಿದರು. ಇವರು ತಮ್ಮ ಎಳೆಯ ವರ್ಷದ ಬಾಲ್ಯದಲ್ಲಿಯೇ ಅಪಾರ ಶಿವಾನುಭವ ಸಂಪತ್ತಿನಿಂದಲೂ, ಅಪೂರ್ವ ಪ್ರತಿಭೆಯಿಂದಲೂ ಶೋಭಿಸುವ ಮಹಾಪುರುಷರಾಗಿದ್ದರು. ಅಂತೆಯೇ ನಿರಂಜನ ಪೀಠದ ಆಗುಹೋಗುಗಳನ್ನು ಆ ಚಿಕ್ಕ ವಯಸ್ಸಿನಲ್ಲಿಯೇ ನಿರ್ವಹಿಸುತ್ತ ದಾಸೋಹಾದಿ ಕ್ರಿಯೆಗಳನ್ನು ಮಾಡಿಕೊಂಡಿರುತ್ತಿರಲು, ಚನ್ನಬಸವೇಶ್ವರರು ತಮ್ಮೆಲ್ಲ ಗುರುಗಳ ಹಾಗೆಯೇ ಪ್ರವಾಸ ಕೈಕೊಂಡು ಹರದನಹಳ್ಳಿಯನ್ನು ಬಿಟ್ಟು, ನೇರವಾಗಿ ಸಿದ್ಧಗಂಗಾ ಕ್ಷೇತ್ರಕ್ಕೆ ಬಂದು ಅಲ್ಲಿ ಗಣಾಪರ್ವವನ್ನು ವಿಜೃಂಭಣೆಯಿಂದ ನೆರವೇರಿಸಿದರು. ಸಿದ್ಧಗಂಗೆಯ ಬೆಟ್ಟದ ಮೇಲಣ ಗವಿಯಲ್ಲಿ ಅನುಷ್ಠಾನಾದಿಗಳನ್ನು ಮಾಡಿಕೊಂಡು ಲಿಂಗಜಂಗಮ ದಾಸೋಹಾದಿ ಕ್ರಿಯೆಗಳನ್ನು ಯಥಾಸಾಂಗವಾಗಿ ನಡೆಯಿಸಿಕೊಂಡು ಬರತೊಡಗಿದರು. ಆ ಸಮಯದಲ್ಲಿ ಗುಬ್ಬಿಯಲ್ಲಿ ಅನೇಕ ಅನುಭಾವಿಗಳೂ, ವಿದ್ವಾಂಸರೂ ಇದ್ದರು. ಇಷ್ಟೇ ಅಲ್ಲ, ೧೫ನೇಯ ಶತಮಾನದಿಂದಲೂ ಗುಬ್ಬಿಯು ಶಿವಶರಣರ ಬೀಡಾಗಿದ್ದ ಬಗೆಗೆ ನಮಗೆ ವಿವರಗಳು ದೊರಕುತ್ತವೆ. ಆಗಿನ ಈ ಊರಿನ ಹೆಸರು 'ಅಮರಗುಂಡ' ಎಂಬುದು. 'ಅಮರಗುಂಡದ ಮಲ್ಲಿಕಾರ್ಜುನ' ಎಂಬ ಪ್ರಸಿದ್ಧ ವಚನಕಾರನು ೧೫ನೇಯ ಶತಮಾನದಲ್ಲಿ ಇಲ್ಲಿ ಆಗಿಹೋದನು. ಅಮರಗುಂಡದ ಮಲ್ಲಿಕಾರ್ಜುನ ದೇವಾಲಯ ಇಂದಿಗೂ ಇಲ್ಲಿದೆ. ಇದೇ ಊರಿನಲ್ಲಿಯೇ ಪ್ರಸಿದ್ಧ ದಾರ್ಶನಿಕನೂ ಶಿವಾನುಭವಿಯೂ ಆದ 'ಮಲ್ಲಣ್ಣ'ನೆಂಬುವನು ಇದ್ದನು. ಅವನು ವಾತುಲಾಗಮಕ್ಕೆ ವ್ಯಾಖ್ಯಾನ ಬರೆದುದಲ್ಲದೆ 'ಗಣ ಭಾಷಿತ ರತ್ನಮಾಲೆ' ಎಂಬ ಹೆಸರಿನ ವೀರಶೈವ ದರ್ಶನದ ನೂರೊಂದು ಸ್ಥಲಕ್ರಮಕ್ಕನುಗುಣವಾದ ವಚನ ಸಂಕಲನ ಗ್ರಂಥವನ್ನು ಬರೆದಿದ್ದಾನೆ. ಈ ಮಲ್ಲಣ್ಣನೇ ಸಿದ್ಧಗಂಗೆಗೆ ಬಂದು ಇಲ್ಲಿಂದ ಮಹಾಶಿವಯೋಗೀಶ್ವರರಾದ ಚನ್ನಬಸವರಾಜೇಂದ್ರ ಸ್ವಾಮಿಗಳವರನ್ನು ಗುಬ್ಬಿಗೆ ಕರೆದೊಯ್ದರು. ಅಲ್ಲಿ ೨೨ ಬಿರುದುಗಳ ಸಮೇತವಾಗಿ

9. ಶಿ. ವಂ ರತ್ನಾಕರ [ಸ. ೦ಹಳಕಟ್ಟಿ] ಪು ೩೫

ಸ್ವಾಮಿಗಳವರ ಉತ್ಸವಾದಿಗಳನ್ನು ಮಾಡಿಸಿ ಅವರಿಂದ ಅನುಗ್ರಹ ದೀಕ್ಷೆಯನ್ನು (ಷಟ್‌ಸ್ಥಲ ಜ್ಞಾನೋಪದೇಶವನ್ನು) ಪಡೆದನು.[10] ಅನಂತರ ಮಲ್ಲಣ್ಣನು ಮಹಾಪ್ರಭುವಾದ ಚನ್ನಬಸವೇಶ್ವರರನ್ನು ತಮ್ಮಲ್ಲಿಯೇ ಉಳಿಸಿಕೊಳ್ಳಬೇಕೆಂದು ಒಂದು ಮಠವನ್ನು ನಿರ್ಮಾಣಮಾಡಿ ಅಲ್ಲಿ ಅವರನ್ನು ಇರಿಸಿದನು. ಆ ಮಠವು ಇಂದಿಗೂ ಗುಬ್ಬಿಯಿಂದ ಒಂದು ಮೈಲು ದೂರದಲ್ಲಿ 'ಚೆನ್ನಳ್ಳಿ' ಎಂಬ ಗ್ರಾಮದಲ್ಲಿದೆ. ಚೆನ್ನಬಸವೇಶ್ವರರ ಸಂಬಂಧದಿಂದಲೇ ಈ ಊರು "ಚೆನ್ನಳ್ಳಿ" ಎಂದು ಇಂದಿಗೂ ಉಳಿದಿರುವುದನ್ನು ಈ ಸಮಯದಲ್ಲಿ ಜ್ಞಾಪಿಸಿಕೊಳ್ಳಬಹುದು. ಶ್ರೀಗಳವರು ತಮಗೆ ಕಟ್ಟಿಸಿದ ಮಠದಲ್ಲಿರುತ್ತ ಶಿವಯೋಗಾನಂದ ತುಂದಿಲರಾಗಿರುತ್ತಿದ್ದು ಇಲ್ಲಿಯೇ ಲಿಂಗೈಕ್ಯರಾದರು. ಅವರ ಗದ್ದುಗೆಯು ಊರಿನ ಪೂರ್ವದಿಬ್ಭಾಗದಲ್ಲಿ ಇಂದೂ ವಿರಾಜಿಸುತ್ತಿದೆ. ಇಂದಿಗೂ ಗುಬ್ಬಿಯ ಅಧಿದೇವತೆ ಚೆನ್ನಬಸವೇಶ್ವರರೇ ಆಗಿದ್ದಾರೆ. ಪ್ರತಿ ವರ್ಷ ರಥೋತ್ಸವಾದಿಗಳು ಜರುಗುತ್ತವೆ.

(ಮುಂದುವರಿಯುವುದು)

---

10. ಈ ಮಲ್ಲಣ್ಣನ ಮನೆತನದ ಶ್ರೇಷ್ಠ ಸಂತತಿಯ ಮನೆತನ. ಈತನು ವೀರಶೈವಾಮೃತ ಮಹಾಪುರಾಣವೆಂಬ ಶ್ರೇಷ್ಠತಮವಾದುದೂ, ವೀರಶೈವ ವಿಶ್ವಕೋಶದಂತಿರುವುದೂ ಆದ ಗ್ರಂಥವನ್ನು, ಭಾವ ಚಿಂತಾರತ್ನವೆಂಬ ಸತ್ಯೇಂದ್ರ ಚೋಳನ ಕಥೆಯನ್ನು ತಿಳಿಸುವ, ಮಂತ್ರ ಮಹಾತ್ಮೆಯ ಪ್ರಾಧಾನ್ಯ ವಿಷಯವನ್ನುಳ್ಳ ಗ್ರಂಥವನ್ನು ಬರೆದಿದ್ದಾನೆ, ಎಂಬ ವಿಷಯ ಈ ಹಿಂದೆ ವಿವರಿಸಲ್ಪಟ್ಟಿದೆ.

# ಏಳರ ಮಹತ್ವ

—ಪ. ರಾಮಕೃಷ್ಣಶಾಸ್ತ್ರಿ

ಜಗತ್ತಿನ ಇತಿಹಾಸ ಮತ್ತು ಧರ್ಮದಲ್ಲಿ ಅನಾದಿಯಿಂದಲೂ ಏಳು ಎಂಬ ಸಂಖ್ಯೆ ವಹಿಸಿರುವ ಪಾತ್ರ ಅಚ್ಚರಿ ತರುವಂತಹುದು. ಸಂಖ್ಯಾಶಾಸ್ತ್ರವನ್ನು ಮನುಷ್ಯ ಹಿಡಿದಂದಿನಿಂದಲೂ ಈ ಸಂಖ್ಯೆ ಅವನ ಮನಸ್ಸನ್ನು ಅಪಾರವಾಗಿ ಆಕರ್ಷಿಸಿರಬೇಕು. ಪುರಾತನ ಬೇಬಿಲೋನಿಯಾ ಮತ್ತು ಅಸ್ಸೀರಿಯಾಗಳಲ್ಲಿ ಇದು ಬಹು ಪವಿತ್ರ ಸಂಖ್ಯೆಯಾಗಿತ್ತು. ಏಳರ ಮೋಹ ಗಣಿತ ಶಾಸ್ತ್ರಜ್ಞರನ್ನು ಬಿಟ್ಟಿರಲಿಲ್ಲ. ಸಂಖ್ಯೆಗಳಲ್ಲಿ ಹೆಚ್ಚು ಪರಿಪೂರ್ಣವಾದುದು ಏಳು ಎಂದು ಹೇಳಿರುವ ಪೈಥಾಗರೊಸ್ 4 ಮತ್ತು 3 ಸೇರಿದಾಗ ಉಂಟಾಗುವ ಈ ಸಂಖ್ಯೆಗೆ ತ್ರಿಕೋನದ 3 ಬಾಹು ಮತ್ತು ಚಚೌಕ 4 ಬಾಹುಗಳ ಸಂಬಂಧವನ್ನು ಪಡೆದಿದೆಯೆಂಬ ವಿಚಿತ್ರ ವಾದವನ್ನು ಮಂಡಿಸಿದ್ದ.

ಏಳು ಸಂಖ್ಯೆಯನ್ನು ಬೈಬಲ್‌ಕೂಡ ಬಿಟ್ಟಿಲ್ಲ ವಿಶ್ವಸೃಷ್ಟಿಯ ಕಾರ್ಯ ಏಳು ದಿನಗಳಲ್ಲಿ ಮುಗಿಯಿತು. ಎನ್ನುವ ಬೈಬಲ್, ಏಳು ವರ್ಷ ಸುಭಿಕ್ಷವಿದ್ದರೆ ಮತ್ತೆ ಏಳುವರ್ಷ ದುರ್ಭಿಕ್ಷದ ಕಾಲ ಏರುತ್ತದೆ ಎಂದು ಹೇಳಿದೆ. ಪ್ರಪಂಚದ ಅದ್ಭುತಗಳು ಕೂಡ ಏಳು ಎನ್ನುವುದು ಇನ್ನೊಂದು ವಿಶೇಷ. ಮನುಷ್ಯನ ಜೀವಾತ್ಮ 7 ಗುಣಗಳನ್ನು ಪಡೆದಿದೆಯೆಂದೂ ಸಪ್ತಗ್ರಹಗಳ ಪ್ರಭಾವ ಅವನ ಮೇಲಿದೆಯೆಂದೂ ವಾದವಿದೆ. ಮನುಷ್ಯ ಶರೀರ ಏಳು ವರ್ಷಕ್ಕೊಮ್ಮೆ ಬದಲಾವಣೆ ಹೊಂದುವುದೆಂದು ಹಿಂದಿನಿಂದಲೇ ಇಂಗ್ಲೆಂಡಿನ ಜನರು ನಂಬುತ್ತಾರೆ. ವೈಜ್ಞಾನಿಕವಾಗಿ ಪರಿಶೀಲಿಸಿದರೆ ಇದು ಅಂಧಶ್ರದ್ಧೆ ಅಲ್ಲ. ಏಳನೆಯ ವಯಸ್ಸಿನಲ್ಲೇ ನಾವು ಮೊದಲಬಾರಿಗೆ ಹಲ್ಲು ಕಳೆದುಕೊಳ್ಳುತ್ತೇವಾದರೆ ಮತ್ತೆ ಏಳು ವರ್ಷದಲ್ಲಿ ಬಾಲ್ಯದಿಂದ ಯೌನಕ್ಕೆ ಕಾಲಿಡುತ್ತೇವೆ. ಮತ್ತೆ ಏಳು ವರ್ಷ ಕಳೆದರೆ ಯೌವನಕ್ಕೂ ಏಳರ ಹತ್ತು ಪಾಲು ವಯಸ್ಸಾದ ಎಪ್ಪತ್ತರಲ್ಲಿ ಸಂಪೂರ್ಣ ವೃದ್ಧಾಪ್ಯಕ್ಕೂ ನಾವು ಸಿದ್ಧರಾಗುತ್ತೇವೆ. ರೋಮಿನಲ್ಲಿ ಏಳು ಮಂದಿ ಪ್ರಾಚೀನ ಬುದ್ಧಿವಂತರ ಉಲ್ಲೇಖವಿದೆ.

ಹಳೆಯ ರೋಮ್‌ನಗರ ಏಳು ಬೆಟ್ಟಗಳ ಮೇಲೆ ನಿರ್ಮಾಣ ಹೊಂದಿತು. ಎನ್ನುತ್ತದೆ ಇತಿಹಾಸ. ಇಂಗ್ಲೆಂಡಿನ ರಾಜ ಎರಡನೆಯ ಜೇಮ್ಸ್ ನಿರಂಕುಶ ಆಡಳಿತಗಾರ. ಅವನ ವಿರುದ್ಧ ಜನತೆಯನ್ನು ಎತ್ತಿಕಟ್ಟಿ ರಾಜಕೀಯ ಆಂದೋಲನ ನಡೆಸಲಾಯಿತು. ಇದನ್ನು ನಡೆಸಿದವರು ಏಳು ಮಂದಿ ಪಾದ್ರಿಗಳು. ಏಳು ಒಂದು ಪವಾಡದ ಸಂಖ್ಯೆಯೆಂದೇ ಹಲವರಿಗೆ ಅದರ ಮೇಲೆ ಅಭಿಮಾನ. ದೇವರು ಏಳು ವಿಧವಾದ ಸಾಮರ್ಥ್ಯ ಪಡೆದಿದ್ದಾನೆಂದೂ ಒಬ್ಬ ಸಾಹಿತಿ ಬರೆದಿದ್ದಾನೆ.

ವಿಶ್ವಪ್ರಸಿದ್ಧವಾದ ಸಾಲೊಮನ್ ದೇವಾಲಯದಲ್ಲಿರುವ ಬಂಗಾರದ ದೀಪಸ್ಥಂಭಗಳ ಸಂಖ್ಯೆ ಏಳು, ವಿಶ್ವದ ಶ್ರೇಷ್ಠ ಮತಗ್ರಂಥಗಳು ಏಳು: 1) ವೇದ 2) ಕುರಾನ್ 3) ಬೈಬಲ್ 4) ಬೌದ್ಧ ತ್ರಿಪಿಟಕೆ 5) ಪಾರ್ಸಿಗಳ ಜೆಂಡ್ ಅವೆಸ್ತಾ 6) ಚೀನಿಯರ ಪಂಚ ಪ್ರಭುಗಳು 7) ಸ್ಕಾಂಡಿನೇವಿಯಾದ ಎಡ್ವರ್. ಜನಿಸಿದ ಮಕ್ಕಳಲ್ಲಿ ಏಳನೆಯ ಮಗು ಹೆಸರಾಂತ ವೈದ್ಯನಾಗುತ್ತಾನೆಂದೂ ಮಗು ಹೆಣ್ಣಾದರೆ ಇನ್ನೂ ವಿಶೇಷವೆಂದೂ ಸ್ಕಾಟ್ ಜನರ ನಂಬಿಕೆ.

18 ನೆಯ ಶತಮಾನದಲ್ಲಿ ಜರುಗಿದ ಒಂದು ಮಹಾಯುದ್ಧ ಏಳು ವರ್ಷಗಳ ಕಾಲ ನಡೆಯಿತು. ಸಾಹಿತ್ಯದಲ್ಲೂ ಏಳು ಸಂಖ್ಯೆ ವಿಶ್ವಪ್ರತಿಷ್ಠೆ ಗಳಿಸಿದೆ. ರಸ್ಕಿನ್ನನ 'ಸೆವೆನ್ ಲ್ಯಾಂಫ್ಸ್ ಆಫ್ ಆರ್ಕಿಟೆಕ್ಚರ್' ಮತ್ತು ವರ್ಡ್ಸ್‌ವರ್ತನ 'ವಿ. ಆರ್. ಸೆವೆನ್' ಕೃತಿಗಳು ಆ ಸಾಲಿಗೆ ಸೇರಿವೆ.

ಭಾರತದ ಪುರಾಣೇತಿಹಾಸಗಳಲ್ಲಂತೂ ಏಳು ಸಂಖ್ಯೆ ಮಹತ್ತರವಾಗಿ ಹೆಣೆದುಕೊಂಡಿದೆ. 'ಆರು ಯತ್ನ ನಿನ್ನದು. ಏಳನೆಯದು ದೇವರ ಇಚ್ಛೆ' ಎನ್ನುತ್ತಾರೆ. ಪೂರ್ವದಿಕ್ಕಿನಲ್ಲಿ ಉದಯಿಸುವ ಸೂರ್ಯನಿಗೆ 'ಸಪ್ತಾಶ್ವ'ನೆಂದು ಹೆಸರು. ಅವನ ರಥಕ್ಕೆ ಅಮೃತ ಸಂಭವ,

ವಹ್ನಿ ಸಂಭವ, ಭಾಷ್ಪ ಸಂಭವ, ಅಂಡ ಸಂಭವ, ವೇದ ಸಂಭವ, ಸಾಮ ಸಂಭವ ಮತ್ತು ಗರ್ಭ ಸಂಭವ ಎಂಬ 7 ಕುದುರೆಗಳನ್ನು ಹೂಡಲಾಗಿದೆ. ಸೂರ್ಯಾರಾಧನೆಗೆ ರಥ ಸಪ್ತಮಿ ಒಳ್ಳೆಯ ದಿನ. ಗ್ರಹಗಳ ಸಂಖ್ಯೆ, ವಾರದಲ್ಲಿ ದಿನಗಳು ಏಳೇ ಅಲ್ಲವೇ !

ಇಂದ್ರನು ವೃತ್ರಾಸುರನನ್ನು ಕೊಂದು ಮಹೇಂದ್ರ, ವಿಂಧ್ಯ, ಮಲಯ, ಸಹ್ಯ, ಶುಕ್ತಿವಂತ, ಋಕ್ಷ ಮತ್ತು ಪಾರಿಯಾತ್ರಗಳೆಂಬ ಸಪ್ತಕುಲ ಪರ್ವತಗಳ ಮೇಲೆ ಅವನ ದೇಹದ ತುಂಡುಗಳನ್ನೊಗೆದನಂತೆ, ಕಾಮನಬಿಲ್ಲಿನಲ್ಲಿ ಕೆಂಪು, ಕೇಸರಿ, ಹಸಿರು, ನೀಲಿ, ಊದಾ ಮತ್ತು ಶಾಮ ಎಂಬ 7 ಬಣ್ಣಗಳಿವೆ. ಸೂರ್ಯನ ಬೆಳಕಿನಲ್ಲೂ ವಿಜ್ಞಾನ ಈ ಸಪ್ತವರ್ಣಗಳನ್ನು ಗುರುತಿಸಿದೆ. ರಾಮಾಯಣದಲ್ಲೂ ಬಾಲ, ಅಯೋಧ್ಯ, ಅರಣ್ಯ ಕಿಷ್ಕಿಂಧ, ಸುಂದರ, ಯುದ್ಧ ಹಾಗೂ ಉತ್ತರಗಳೆಂದು ಏಳು ಕಾಂಡಗಳಿವೆ. ಲಕ್ಷ್ಮಣನು ಸೀತೆಯ ರಕ್ಷಣೆಗಾಗಿ ಬರೆದ ಲಕ್ಷ್ಮಣ ರೇಖೆಯ ಸಂಖ್ಯೆಯೂ ಏಳು!

ಪುರಾಣಗಳಲ್ಲಿ ಭಿಂದಿವಾಲ, ತೋಮರ, ಕೃಪಾಣ, ಪಟ್ಟಿಶ, ಕ್ಷೇಪಣಿ, ನಾರಾಚ ಮತ್ತು ಪಾಕ ಎಂಬ ಯುದ್ಧಕಾಲದ ಏಳು ವಿಶೇಷ ಆಯುಧಗಳನ್ನು ಹೆಸರಿಸಲಾಗಿದೆ. ಲೋಕಗಳು ಮೇಲೆ ಏಳು, ಕೆಳಗೆ ಏಳು ಎಂದು ಹೇಳಲ್ಪಟ್ಟಿದೆ. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನಲೋಕ ತಪೋಲೋಕ, ಸತ್ಯಲೋಕಗಳೆಂದು 7 ಊರ್ಧ್ವಲೋಕಗಳು. ಅತಲ, ವಿತಲ, ಸುತಲ ತಲಾತಲ, ಪಾತಾಳ, ರಸಾತಲ, ಮಹಾತಲಗಳೆಂದು ಏಳು ಅಧೋಲೋಕಗಳೆಂದು ಪೂರ್ವಿಕರ ಅಂಬೋಣ.

ಹಿಂದೆ ಗಂಗೆ, ಯಮುನೆ, ಸರಸ್ವತಿ, ಶತದ್ರು, (ಸೆಟ್ಲೆಜ್), ಪರುಷಣಿ (ರಾವಿ), ಆರ್ಜಕೀಯ ಮತ್ತು ಮರುದ್ವಿದಾ ಎಂಬ 7 ನದಿಗಳನ್ನು ಹೆಸರಿಸಲಾಗಿದೆ. ಆದರೆ ವೈದಿಕರ, ಸ್ನಾನಮಾಡುವಾಗ ಪಠಿಸುವ ಏಳು ಪುಣ್ಯನದಿಗಳು. 'ಗಂಗೇಚ ಯಮುನೇ ಚೈವ ಗೋದಾವರಿ ಸರಸ್ವತೀ, ನರ್ಮದೆ, ಸಿಂಧು ಕಾವೇರಿ........ ಗಳೆನಿಸಿವೆ. ಲವಣ, ಕ್ಷೀರ ಇಕ್ಷು, ಸುರಾ, ಸರ್ಪಿ, ದಧಿ ಮತ್ತು ಶುದ್ಧೋಧಕ ಎಂಬ ಏಳು ಸಮುದ್ರಗಳ ವರ್ಣನೆ ಅಜ್ಜಿ ಕತೆಗಳಲ್ಲೂ ಬರುತ್ತದೆ ಆ ಸಮುದ್ರಗಳಲ್ಲಿ ಜಂಬೂ, ಶಾಲ್ಮಲಿ, ಕ್ರೌಂಚ, ಶಾಕ, ಗೋಮೇಧಕ, ಕುಶ ಹಾಗೂ ಪಕ್ಷ ಎಂಬ ಏಳು ದ್ವೀಪಗಳಿದ್ದುವಂತೆ.

ಪೂರ್ವಿಕರು ಅಯೋಧ್ಯ, ಮಥುರಾ, ಮಾಯಾ ಕಾಶೀ, ಕಂಚೀ, ಅವಂತಿಕಾ, ಪುರಿದ್ವಾರಾವತಿ ಎಂಬ ಏಳು ಮೋಕ್ಷದಾಯಕ ಕ್ಷೇತ್ರಗಳ ಹೆಸರನ್ನು ಸ್ಮರಿಸುತ್ತಿದ್ದರು. ಪುರಾಣಗಳಲ್ಲಿ ಚಿರಂಜೀವಿಗಳೆಂದು ಹೆಸರಿಸಲಾದವರು ಏಳು ಮಂದಿ. ಅಶ್ವತ್ಥಾಮ, ಬಲಿ, ವ್ಯಾಸ. ಹನುಮಂತ, ವಿಭೀಷಣ, ಕೃಪಾ ಮತ್ತು ಪರಶುರಾಮರೇ ಆ ಮಹಿಮಾನ್ವಿತರು. ಸ್ಮೃತಿಗಳ ಸಂಖ್ಯೆಯೂ ಏಳು. ಗೌತಮ, ಆಪಸ್ಥಂಭ, ಅಶ್ವಲಾಯನ, ಬೃಹಸ್ಪತಿ, ಪರಾಶರ, ನಾರದ ಮತ್ತು ಗೋಬಿಲ ಎಂಬ ಏಳು ಮಂದಿ ಆ ಸ್ಮೃತಿಕಾರರು.

ವೇದಕಾಲದ ಮಹರ್ಷಿಗಳಲ್ಲಿ ಮರೀಚಿ, ಅಂಗಿರ ಪುಲಸ್ತ್ಯ, ಕ್ರತು, ಅತ್ರಿ, ವಸಿಷ್ಠ ಮತ್ತು ಪುಲಿಹ ಎಂಬ 7 ಮಂದಿ ಅಗ್ರ ಮಾನ್ಯತೆ ಪಡೆದಿದ್ದರು. ಬ್ರಾಹ್ಮಣರಲ್ಲಿ, ವಸಿಷ್ಠ , ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಕಶ್ಯಪ, ಗೌತಮ ಮತ್ತು ಅತ್ರಿ ಎಂಬ ಏಳು ಗೋತ್ರದವರಿದ್ದಾರೆ. ಕಣ್ವ, ಭಾರದ್ವಾಜ, ಅಂಗೀರಸ, ವಸಿಷ್ಠ ಗೃತ್ಸಮದ, ವಿಶ್ವಾಮಿತ್ರ, ಅತ್ರೇಯ ಇವರು ಸಪ್ತ ಕುಲ ಪುರೋಹಿತರೆಂದು ಆರ್ಯರ ಕಾಲದಲ್ಲಿ ಹೆಸರಾಗಿದ್ದರು.

ವೇದ, ವೈಷ್ಣವ, ಶೈವ, ವಾಮಾಚಾರ, ದಕ್ಷಿಣ, ಸಿದ್ಧಾಂತ ಮತ್ತು ಶಾಕ್ಯಗಳೆಂಬ ಏಳು ಧರ್ಮಾನುಯಾಯಿಗಳು ನಮ್ಮಲ್ಲಿ ಮುಖ್ಯರು. ವೇದದಲ್ಲಿ ಹೇಳಿದ ಏಳು ಮುಖ್ಯ ಛಂದಸ್ಸುಗಳೆಂದರೆ ಗಾಯಿತ್ರಿ, ಉಷ್ಣಿಕ್, ಜಗತಿ, ತ್ರಿಷ್ಟುಪ್, ಬೃಹತಿ, ಪಂಕ್ತಿ, ಮತ್ತು ಅನುಷ್ಟುಪ್‌ಗಳು. ವ್ಯಾಕರಣದಲ್ಲಿ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸಂಬಂಧ, ಅಧಿಕರಣಗಳೆಂದು ಏಳು ವಿಭಕ್ತಿಗಳು ಬರುತ್ತವೆ.

ಬ್ರಾಹ್ಮಿ, ಕೌಮಾರಿ, ಮಾಹೇಶ್ವರಿ, ವಾರಾಹಿ, ಇಂದ್ರಾಣಿ, ಚಾಮುಂಡಿ, ವೈಷ್ಣವಿ–ಈ ಏಳು ಮಂದಿ ಸಪ್ತ ಮಾತೃಕೆಯರೆಂದು ಹೆಸರಾಗಿದ್ದಾರೆ. ಪುರಾಣಗಳಲ್ಲಿ ದಂಡಕ, ದ್ವೈತ, ಅಶೋಕ, ನೈಮಿಷ, ಸುಂದರ,

ಖಾಂಡವ ಮತ್ತು ನಂದನಗಳೆಂಬ ಪ್ರಸಿದ್ಧ ವನಗಳ ಸಂಖ್ಯೆ ಏಳೇ ಆಗಿದೆ.

ರಾಜಸಭೆಗೆ ಶೋಭಾಯಮಾನವಾಗಿರುವ ಸಪ್ತಾಂಗಗಳೆಂದು ಕವಿ, ವಿದ್ವಾಂಸ, ಭಟ, ಐತಿಹಾಸಿಕ, ಗಾಯಕ, ಪೌರಾಣಿಕ ವಿದೂಷಕರನ್ನು ಹೆಸರಿಸಲಾಗಿದೆ ಯಲ್ಲದೆ ರಾಜ್ಯಾಡಳಿತದ ಏಳು ಅಂಗಗಳೆಂದರೆ ಮಂತ್ರಿ, ಸ್ವಾಮಿ, ದುರ್ಗ, ಜನಪದ, ಸೈನ್ಯ, ಮಿತ್ರ, ಕೋಶಗ ಳೆಂದು ವರ್ಣಿಸಲಾಗಿದೆ.

ಬೆಂಕಿಯ ನಾಲಿಗೆಗಳು ಕಾಳಿ, ಕರಾಳಿ, ಮನೋಜವೆ, ಉಗ್ರೆ, ದೂಮ್ರ ಪ್ರದೀಪ್ತಿ ಮತ್ತು ಸುಲೋಹಿತವೆಂಬ ಏಳು ವರ್ಣ ಪಡೆದಿವೆ. ಏಳು ದಿವ್ಯ ವಸ್ತುಗಳ ಪಟ್ಟಿಯಲ್ಲಿ ತಂಡುಲ, ರವಿ, ಕೋಶ, ಅಗ್ನಿ ನೀರು, ವಿಷ, ತಪ್ತ, ಮಾಷಗಳ ಹೆಸರು ಬರುತ್ತದೆ. ಷಡ್ಜ, ಋಷಭ, ಮಧ್ಯಮ, ಗಾಂಧಾರ, ಧೈವತ, ನಿಷಾಧ ಮತ್ತು ಪಂಚಮಗಳು, ಸ ರಿ ಗ ಮ ಪ ದ ನಿ ಎಂಬ ಏಳಕ್ಷರಗಳು ಸಂಗೀತಶಾಸ್ತ್ರದಲ್ಲಿ ವರ್ಣಿಸಿದ ಸಪ್ತಸ್ವರಗಳು. ಹಾಗೆಯೇ ದ್ರುವ, ಮಟ್ಟೆ, ರೂಪಕ, ಝಂಪೆ, ತ್ರಿಪುಟ ಆದಿ ಮತ್ತು ಅಷ್ಟ ಎಂಬ ಸಪ್ತ ತಾಳಗಳು ಹೇಳಲ್ಪಟ್ಟಿವೆ.

ಆಯುರ್ವೇದವು ಪ್ರತಿಯೊಬ್ಬ ಮನುಷ್ಯನಲ್ಲಿ ಯೂ ರಕ್ತ, ಮಾಂಸ, ಮಜ್ಜೆ, ಅಸ್ತಿ, ಶುಕ್ರ, ರಸ, ಮೇದಸ್ಸುಗಳೆಂಬ ಸಪ್ತಧಾತುಗಳಿವೆಯೆಂದು ಹೇಳುತ್ತದೆ. ಮಾನವನು ಬೇಟೆ, ಜೂಜು, ಕುಡಿತ, ಸ್ತ್ರೀ, ಕಠಿಣ, ದಂಡ, ಕಠಿಣ ಶಿಕ್ಷೆ, ವಾಕ್‌ಪೌರುಷ, ದುಶ್ಚಾಳಿಗಳಾದ ಈ ಏಳರಿಂದ ದೂರವಿದ್ದು, ಭಕ್ತಿ, ಪ್ರೇಮ, ದಯೆ. ಶಕ್ತಿ, ಔದಾರ್ಯ, ಜ್ಞಾನ, ಕ್ಷಮೆಗಳೆಂಬ ಸಪ್ತಗುಣಗ ಳನ್ನು ಒಲಿಸಿಕೊಳ್ಳಬೇಕೆಂದು ಗ್ರಂಥಗಳು ಸಾರುತ್ತವೆ. ಸಪ್ತಮದಗಳಾದ ಯೌವನ, ಸ್ತ್ರೀ, ಕುಲ, ಅನ್ನ, ದಾನ ವಿದ್ಯೆ ಹಾಗೂ ಉದ್ಯೋಗ ಮದಗಳು ತುಂಬಾ ಕೆಟ್ಟವೆ ನ್ನುತ್ತದೆ ನೀತಿ ಶಾಸ್ತ್ರ.

ಹಿಂದೂಗಳ ವಿವಾಹದಲ್ಲಿ ವಧೂವರರು ಯಜ್ಞಕ್ಕೆ ಏಳು ಬಾರಿ ಪ್ರದಕ್ಷಿಸಿ, ನಡೆಸುವ ಸಪ್ತಪದಿ ವಿಧಿ ಮಹತ್ವಪೂರಿತ. ಅದರಿಂದ ಇಚ್ಛೆ, ಶಕ್ತಿ, ದಾಂಪತ್ಯ, ಅನ್ಯೋನ್ಯ, ಮೈತ್ರಿ, ಪಶು, ಯಜ್ಞಫಲ ಎಂಬ ಏಳು ಫಲಗಳು ಪ್ರಾಪ್ತಿಯಾಗುವವಂತೆ.

ಮಕ್ಕಳಿಲ್ಲದವರು ಸಂತಾನಕ್ಕಾಗಿ ಏಳು ದಿನಗ ಳಲ್ಲಿ ನಡೆಸುವ ಭಾಗವತ ಪಾರಾಯಣ 'ಸಪ್ತಾಹ' ವೆಂದು ಹೆಸರು ಪಡೆದಿದೆ. 700 ಶ್ಲೋಕಗಳಿರುವ ದೇವಿ ಮಹಾತ್ಮೆಗೆ 'ಸಪ್ತಶತಿ' ಎಂದು ಕರೆಯುತ್ತಾರೆ. ಕಾಳಿ ದಾಸನು ಏಳಂಕಿನಲ್ಲಿ ರಚಿಸಿದ ಶಾಕುಂತಲಾ ನಾಟಕಕ್ಕೆ ಸಪ್ತಾಂಕವೆಂದೂ ಹೇಳುತ್ತಾರೆ. ವಿಶೇಷವಾಗಿ 7 ಎಲೆ ಗಳಿರುವ ಬಾಳೆಯಗಿಡಕ್ಕೆ ಸಪ್ತಚ್ಛದವೆಂದೂ ಹೆಸರಿದೆ.

ಇದು ಅಂಧ ಶ್ರದ್ಧೆಯೂ ಆಗಿರಬಹುದು. ಆದರೆ ಏಳರಸುತ್ತ ಇಷ್ಟೊಂದು ವಿಶಿಷ್ಟತೆಗಳು ಏಕೆ ಹೆಣೆದುಕೊಂಡಿವೆಯೋ ಯೋಚಿಸಬೇಕಾದ ವಿಚಾರ.

( ಆಧಾರಗಳಿಂದ )

# ಸಹಾನುಭೂತಿಯ ಚಮತ್ಕಾರ

—ಬಿ. ಸುಬ್ರಾಯ ಅಡಿಗ

ಮೋಹನ್ ನದೀತೀರದಲ್ಲಿ ನಿಂತಿದ್ದ. ಇದ್ದಕ್ಕಿದ್ದಂತೆ 'ರಕ್ಷಿಸಿ, ರಕ್ಷಿಸಿ' ಎಂಬ ಕೂಗು ಕೇಳಿಸಿತು, ಯಾರೋ ಒಬ್ಬ ಮುಳುಗುತ್ತಿದ್ದ. ತಕ್ಷಣ ಕೋಟನ್ನೆಸೆದು ನದಿಗೆ ಹಾರಿದ. ತುಸುಹೊತ್ತಿನಲ್ಲೇ ಆತ ಆ ಮುಳುಗುವವನ ಜೊತೆ ದಡದಲ್ಲಿದ್ದ.

ಒಂದು ದಿನ ವಿನೋದ ರಾತ್ರಿ ಬಲುತಡವಾಗಿ ಬಂದ, ಮೋರೆಯ ಮೇಲೆ ಚಿಂತಾ ರೇಖೆಗಳಿದ್ದವು, ಮನೆಯಲ್ಲಿ ಪತ್ನಿ ಅವನ ಹಾದಿ ಕಾಯುತ್ತಿದ್ದಳು, ಪತಿಯ ಮುಖವನ್ನು ಕಾಣುತ್ತಲೇ ಅವಳ ಭಾವನೆ ಬದಲಾಯಿತು. ಸಂಗತಿ ಕೇಳಿ ಅವನ ಉತ್ಸಾಹ ಹೆಚ್ಚಿಸಿದಳು, ಇಡೀ ದಿನ ದುಡಿಮೆಯ ಬಗ್ಗೆ ಸಹಾನುಭೂತಿ ತೋರ್ಪಡಿಸಿದಳು. ಸಮಸ್ಯೆಗೆ ಮರುದಿನ ಪರಿಹಾರ ಯೋಜಿಸುವಂತೆ ಸೂಚಿಸಿದಳು.

ಸುರೇಶ ವಿಭಾಗದ ಪರೀಕ್ಷೆಯಲ್ಲಿ ಪಾಸಾದ ಸುದ್ಧಿ ತಿಳಿಯುತ್ತಲೇ ಅವನ ಉಚ್ಚಧಿಕಾರಿ ಅವನನ್ನು ತನ್ನ ಕೋಣೆಗೆ ಕರೆಸಿಕೊಂಡು ಚಹ ಕುಡಿಸಿ ಅಭಿನಂದನೆ ಸಲ್ಲಿಸಿದ; ಅಲ್ಲದೆ ಸ್ನೇಹ ದೃಷ್ಟಿಯಿಂದ ಕಳುಹಿಸಿದ.

ಒಂದು ದಿನ ಇಬ್ಬರು ಮಿತ್ರರು—ಒಬ್ಬ ಬಡವ ಇನ್ನೊಬ್ಬ ಶ್ರೀಮಂತ—ದೋಣಿಯಲ್ಲಿ ಕುಳಿತು ಹೊಳೆ ದಾಟುತ್ತಿದ್ದರು. ರಾತ್ರಿ ತನ್ನ ಮನೆ ಸುಟ್ಟುಹೋಯಿತೆಂದು ದಾರಿಯಲ್ಲಿ ಅಂಬಿಗ ಹೇಳಿದ. ಹೊಳೆ ದಾಟಿದ ಬಳಿಕ ಬಡ ಗೆಳಯ ತನ್ನ ಜೇಬು ತಡಕಾಡಿದ. ಒಳಗಿನಿಂದ ಒಂದು ರೂಪಾಯಿ ತೆಗೆದು ಅಂಬಿಗನ ಕೈಯಲ್ಲಿಡುತ್ತಾ, 'ಮಿತ್ರಾ..... ಈಗ ನನ್ನ ಬಳಿ ಇಷ್ಟೇ ಇದೆ ಇದನ್ನು ನಿನ್ನ ಮನೆಗಾಗಿ ಬಳಸಿಕೋ' ಎಂದ.

ನಾಲ್ಕನೇ ಮನೆಯಲ್ಲಿ ಯಾರೋ ತೀರಿದ್ದರು. ಶಾಮ್ ಶವಸಂಸ್ಕಾರಕ್ಕೆ ಹೋಗಲಿಲ್ಲ. ಏಕೆಂದರೆ ಅವರಿಗೆ ಸುದ್ದಿ ಮುಟ್ಟಲಿಲ್ಲ. ಕಶ್ಯಪರು ತಮ್ಮ ಕೇರಿಯ ೮ ನೇ ಮನೆಯಲ್ಲಿ ಯಜಮಾನರು ಕಾಯಿಲೆಬಿದ್ದಿದ್ದಾರೆಂದು ಕೇಳಿ ಅಲ್ಲಿಗೆ ಹೋದರು. ಇರುಳಿಡೀ ಅಲ್ಲೇ ಇದ್ದರು.

ಇವು ಸಮಾಜ ಜೀವನದ ಕೆಲ ಉದಾಹರಣೆಗಳು. ಕೆಲವರು ಇತರರಿಗೆ ಸಹಾನುಭೂತಿ ತೋರಿಸಿದರೆ ಕೆಲವರು ತಟಸ್ಥರಾಗಿಯೇ ಉಳಿದರು.

ಸಹಾನುಭೂತಿ ಎಂದರೆ ಸಹ ಅನುಭೂತಿ. ನಮಗೆ ಇತರರ ಬಗ್ಗೆ ಸಹಾನುಭೂತಿ ಉಂಟಾದರೆ ನಾವು ಅವರ ಮಟ್ಟಕ್ಕೆ ತಲುಪುತ್ತೇವೆ. ಆ ಮಟ್ಟಕ್ಕೆ ಬಂದು ಭೌತಿಕ ಹಾಗೂ ಮಾನಸಿಕ—ಈ ಎರಡೂ ರೂಪಗಳಿಂದ ನೋಡುತ್ತೇವೆ. ಇತರರಿಗೆ ಸಹಾನುಭೂತಿ ತೋರಿಸುವಾಗ ನಮ್ಮಲ್ಲಿ ವಿನೋದಭಾವ, ಜ್ಞಾನ ಹಾಗೂ ಕಲ್ಪನೆ ಈ ಮೂರು ಇರಬೇಕು. ನಮ್ಮಲ್ಲಿ ಅಂತಹ ಇಚ್ಛೆ ಇದ್ದರೇನೆ ಈ ಭಾವನೆ ಮೂಡಬಲ್ಲುದು. ಇದೊಂದು ಸುಖಕರ ಹಾಗೂ ಆನಂದದಾಯಕ ಗುಣ.

ಇತರರ ದುಃಖದಲ್ಲಿ ನಮಗೆ ಸಹಾನುಭೂತಿ ಇರಬಹುದು. ಆದರೆ ಹೆರವರ ಸುಖದಲ್ಲೂ ಸಹಾನುಭೂತಿ ಉಂಟಾದರೆ ಅದು ಬಹುದೊಡ್ಡ ವಿಷಯವೆನ್ನಬಹುದು. ಹೆಚ್ಚಾಗಿ ಇಂತಹ ಸಂದರ್ಭಗಳಲ್ಲಿ ನಾವು ಮತ್ಸರದಿಂದ ತುಂಬಿರುತ್ತೇವೆ. ಆದರೆ ಅಧೀನತನ ಸಫಲತೆಯ ಬಗ್ಗೆ ಉಚ್ಚಧಿಕಾರಿ ಸಂತೋಷಗೊಂಡು ಅಭಿನಂದನೆ ಸಲ್ಲಿಸಿದುದು ನಿಜಕ್ಕೂ ದೊಡ್ಡಗುಣ. ಇಂತಹ ಭಾವನೆ ಎಲ್ಲರಲ್ಲೂ ಇರಬೇಕು.

ನಾವು ಭಯ, ಸಂದೇಹ ಇಲ್ಲವೇ ಆಲಸ್ಯದಿಂದ ನಮ್ಮ ಮನಸ್ಸಿನ ಕಿಟಕಿಯನ್ನು ಇತರರ ಬಗ್ಗೆ ತೆರೆದಿಡುವುದಿಲ್ಲ. ಆಗ ಇತರರು ಏನುಮಾಡುತ್ತಾರೆ, ಏನು ನಡೆಯುತ್ತಿದೆ! — ಎಂಬುದು ನಮಗೆ ತಿಳಿಯುವುದೇ ಇಲ್ಲ.

ಬೇರೆ ಬೇರೆ ಮಟ್ಟದ ವಕ್ತಿಗಳು ಪರಸ್ಪರರನ್ನು ಅರ್ಥಮಾಡಿಕೊಳ್ಳುವುದಿಲ್ಲ. ಶ್ರೀಮಂತ ಬಡವನ

ಭಾವನೆಗಳನ್ನು ಅರಿಯಲಾರ; ಅದೇ ರೀತಿ ಬಡವನಿಗೂ ಶ್ರೀಮಂತನ ವಿಷಯ ತಿಳಿಯುವುದಿಲ್ಲ. ಹೆಚ್ಚಾಗಿ ಬೇರೆ ಮಟ್ಟದ ಜನ ಪರಸ್ಪರ ಸೇರುತ್ತಾರೆ. ಅವರು ಪರಸ್ಪರ ಭಾವನೆಗಳನ್ನರಿತರೆ ಸಹಾನುಭೂತಿ ಮಾಡಬಲ್ಲುದು. ಒಬ್ಬ ಲಕ್ಷಾಧೀಶ ಹಾಗೂ ಒಬ್ಬ ವಿದ್ಯಾರ್ಥಿ ಇಬ್ಬರಿಗೂ ಅಂಚೆ ಚೀಟಿ ಸಂಗ್ರಹದ ಹವ್ಯಾಸ ಇದ್ದರೆ ಇಬ್ಬರಲ್ಲೂ ಪರಸ್ಪರ ಸಹಾನುಭೂತಿ ಮಾಡಬಲ್ಲುದು.

ಇತರರೊಡನೆ ಸಂಪರ್ಕ ಬೆಳೆಸಲು ಸಹಾನುಭೂತಿಗಿಂತ ಮಿಗಿಲಾದ ಸಾಧನ ಬೇರೊಂದಿಲ್ಲ. ಪ್ರತಿಯೊಬ್ಬನೂ ದುಃಖದ ವೇಳೆ ಸಹಾನುಭೂತಿ ಪಡೆಯ ಬಯಸುತ್ತಾನೆ. ಅದು ದೊರೆತಾಗ ಪ್ರಸನ್ನನಾಗುತ್ತಾನೆ. ನಾವು ಇತರರಿಂದ ಇದನ್ನು ಅಪೇಕ್ಷಿಸುವಾಗ, ಇತರರಿಗೂ ಸಹಾನುಭೂತಿ ನೀಡಬೇಕಾದುದು ನಮ್ಮ ಧರ್ಮವಲ್ಲವೆ !

ನನಗೆ ಒಂದು ಶಾಲೆಯ ವೈಶಿಷ್ಟ್ಯ ನೆನಪಾಗುತ್ತಿದೆ. ಅಲ್ಲಿಯ ಎಲ್ಲ ವಿದ್ಯಾರ್ಥಿಗಳೂ ಸರದಿಯಂತೆ ಮೂಕ, ಕಿವುಡ, ಕುರುಡ, ಕುಂಟ ಮೊದಲಾದ ಅಂಗ ವಿಕಲರಂತೆ ಅಭಿನಯಿಸಬೇಕಿತ್ತು. ಕುರುಡನಾಗಲಿದ್ದ ಹುಡುಗನ ಕಣ್ಣಿಗೆ ರಾತ್ರಿಯೇ ಪಟ್ಟಿ ಕಟ್ಟಿಬಿಡಲಾಗುತ್ತಿತ್ತು. ಬೆಳಗ್ಗೆ ಆತ ಕುರುಡನಂತೆಯೇ ಏಳುತ್ತಿದ್ದ. ಕುರುಡತನ ಎಂದರೇನೆಂದು ಅವನಿಗೆ ಚೆನ್ನಾಗಿ ಮನವರಿಕೆಯಾಗುತ್ತಿತ್ತು. ಮುಂದೆ ಜೀವನದಲ್ಲಿ ಯಾವ ಕುರುಡನಿಗಾದರೂ ಸಹಾಯ ಮಾಡುವಾಗ ಅವನಲ್ಲಿ ವಾಸ್ತವಿಕ ಸಹಾನುಭೂತಿ ಮಾಡುತ್ತಿತ್ತು. ಇಂತಹ ಜನರೇ ಕುರುಡನಿಗೆ ಹಾರ್ದಿಕವಾಗಿ ದಾರಿ ತೋರಬಲ್ಲರು. ನಿಜವಾದ ಸಹಾನುಭೂತಿ ಬಾಯಿಂದಲ್ಲ - ಕಣ್ಣಿನಿಂದ ಹೊಮ್ಮುವುದು. ಕಂಗಳ ಸ್ನೇಹಮಯ ಹೊಳಪಿನಿಂದ ಹೊಮ್ಮುವ ಸುಖ ಇನ್ನೊಬ್ಬನ ಬಗ್ಗೆ ನಿಮ್ಮಲ್ಲಿ ಎಷ್ಟೊಂದು ಕಳಕಳಿ ತುಂಬಿದೆಯೆಂಬುದನ್ನು ತೋರ್ಪಡಿಸುತ್ತದೆ.

ಯಾರಾದರೂ ತಮಗೊದಗಿದ ಅಪಘಾತವನ್ನು ವರ್ಣಿಸುತ್ತಿದ್ದರೆ ನಾವು ಲಕ್ಷ್ಯಗೊಟ್ಟು ಕೇಳುವುದಿಲ್ಲ.___ ಅದಕ್ಕೆ ಬದಲು ಕಳೆದ ವರ್ಷ ನನ್ನ ತಮ್ಮನಿಗೂ ಹೀಗೆಯೇ ಆಗಿತ್ತು !– ಎಂದು ಹೇಳಿಬಿಡುತ್ತೇವೆ. ಈಗ ವರ್ಣಿಸುವಾತ ತನ್ನ ಮಾತನ್ನು ನಿಲ್ಲಿಸಿಬಿಡುವ. ಯಾರಿಗೂ ತನ್ನ ಬಗ್ಗೆ ಸಹಾನುಭೂತಿ ಇಲ್ಲ - ಎಂದು ಭಾವಿಸುವ. ಆದ್ದರಿಂದ ಯಾರಾದರೂ ತಮ್ಮ ದುಃಖದ ಘಟನೆಯನ್ನು ಹೇಳುತ್ತಿದ್ದರೆ ಅದನ್ನು ಲಕ್ಷ್ಯಗೊಟ್ಟು ಕೇಳಬೇಕು. ಈಗ ಅವನಿಗೆ ಸಮಾಧಾನ ಅನ್ನಿಸುವುದು.

ನಮ್ಮ ಮನೆಯಲ್ಲಿ ಯಾವಾಗಲೂ ನಮಗೆ ಸಹಾನುಭೂತಿಯ ಅಗತ್ಯವಿದೆ. ಮಕ್ಕಳಿಗೆ ಶಿಸ್ತು ಕಲಿಸುವ ವೇಳೆ, ನಮಗೆ ನಮ್ಮ ಬಾಲ್ಯವೇ ನೆನಪಾಗದಿದ್ದರೆ ಅವರ ಮಟ್ಟಕ್ಕೆ ನಾವು ಇಳಿಯದಿದ್ದರೆ, ಬಹುಶಃ ನಾವು ಕಠೋರವಾಗಿ ವರ್ತಿಸುತ್ತೇವೆ ಎಂದರ್ಥ.

ಸಹಾನುಭೂತಿಗೆ ಎಲ್ಲೆಡೆಯಲ್ಲೂ ಅವಕಾಶವಿದೆ. ನಾವು ದಿನಾಲು ಹಲವರ ಸಂಪರ್ಕ ಹೊಂದುತ್ತೇವೆ. ಬಹುಹೊತ್ತು ಇತರರೊಡನೆ ಇರುತ್ತೇವೆ. ಆದರೂ ನಾವು ಮಾನಸಿಕವಾಗಿ ಅವರಿಂದ ಎಷ್ಟೋ ದೂರ ಉಳಿಯುತ್ತೇವೆ. ನನಗೆ ನಮ್ಮ ಉಚ್ಚಾಧಿಕಾರಿಯ ಒಂದು ಅಭ್ಯಾಸ ಯಾವಾಗಲೂ ನೆನಪಾಗುತ್ತಿದೆ. ಮಾರ್ಚ್ ತಿಂಗಳಲ್ಲಿ ಆಫೀಸಿನ ಕೆಲಸ ಅತಿ ಹೆಚ್ಚಾದಾಗ ಅವರು ಸ್ವತಃ ನನ್ನ ಕೆಲವು ವಿಭಾಗಗಳನ್ನು ನೋಡಿಕೊಳ್ಳುತ್ತಿದ್ದರು. ಈ ಉಪಕಾರವನ್ನು ನಾನು ಜೀವನವಿಡೀ ಮರೆಯುವಂತಿಲ್ಲವಷ್ಟೆ ! ಅದೇ ರೀತಿ ನಾನು ಈಗ ಒಂದು ಆಫೀಸಿನ ಉಚ್ಚಾಧಿಕಾರಿಯಾಗಿದ್ದರೂ ನನ್ನ ಅಧೀನಸ್ಥರನ್ನು ಪ್ರೀತಿಯಿಂದ ನೋಡಿಕೊಳ್ಳಲು ಅವರ ಆ ಸಹಾನುಭೂತಿಯೇ ಕಾರಣವಾಯಿತು. ಹೀಗಾಗಿ ನನಗೆ ಎಲ್ಲ ಕೆಲಸಗಾರರ ಸಹಕಾರವೂ ಸುಲಭವಾಗಿ ಸಿಗುತ್ತಿದೆ.

ದಯೆಯಂತೆಯೇ ಸಹಾನುಭೂತಿಯು ಇಮ್ಮಡಿ ಲಾಭ ಕೊಡುವಂತಹದು. ತೋರಿಸುವವನಿಗೆ ಆನಂದ ಸಿಗುವಂತೆಯೇ ಪಡೆಯುವವನ ಉತ್ಸಾಹವನ್ನು ಹೆಚ್ಚಿಸುವುದು. ಸಹಾನುಭೂತಿಯಿಂದ ಕೆಡುಕನ್ನು ಗೆಲ್ಲಲು ಸಾಧ್ಯ. ಎಂತಹ ಕಠೋರ ಹೃದಯವನ್ನು ಕರಗಿಸಬಹುದು. ಪರಿಣಾಮವಾಗಿ ಮನುಷ್ಯ ಸಮಾಜದ ಮಟ್ಟ ಉನ್ನತವಾಗುವುದು.

ಸಹಾನುಭೂತಿ ಉಂಟಾಗಲು ಪ್ರೀತಿಯೇ ಆಧಾರ. ಇತರರನ್ನು ಪ್ರೀತಿಸಿದಾಗಲೇ ಅವರ ಬಗ್ಗೆ ಸಹಾನುಭೂತಿ ಮೂಡಬಲ್ಲದು. ಇತರರಿಗೆ ಸಹಾನುಭೂತಿ ತೋರ್ಪಡಿಸುವವರು ಸ್ವತಃ ರಕ್ಷಿಸಲ್ಪಡುತ್ತಾರೆ. ಸಹಾನುಭೂತಿಯಲ್ಲಿ ಅಪಾರ ಶಕ್ತಿ ಅಡಗಿದೆ.

ಆಲಸ್ಯ ಸ್ವಾರ್ಥಗಳು ಇತರರಿಗೆ ಸಹಾನುಭೂತಿ ತೋರಿಸದಂತೆ ತಡೆಯುತ್ತವೆ. ಆದರೆ ಇದರಿಂದ ಜನರು ಸ್ವತಃ ಹಾನಿಗೊಳಗಾಗುತ್ತಾರೆ. ಅಗತ್ಯ ಬಂದಾಗ ಅವರಿಗೆ ಯಾರೂ ಸಹಾಯಮಾಡುವುದಿಲ್ಲ.

ಜೀವನದಲ್ಲಿ ಪ್ರೀತಿಯೇ ಅತಿ ದೊಡ್ಡ ವಸ್ತು. ಕಷ್ಟಗಳು ಮುಕ್ತಿ ಹಾದಿಯೇ ಕಾಣಿಸದಾಗ ಇತರರನ್ನು ಪ್ರೀತಿಸಬೇಕು. ಆಗ ಸಮಸ್ಯೆ ತಾನಾಗಿಯೇ ದೂರಾಗುವುದು.

ಸಹಾನುಭೂತಿಯ ಭಾಷೆ ಮನುಷ್ಯರಿಗೆ ಅಷ್ಟೇ ಅಲ್ಲ— ಪಶುಗಳಿಗೂ ಅರ್ಥವಾಗುವುದು. ಪ್ರೇಮದ ಬಳಿಕ ಸಹಾನುಭೂತಿಯೇ ಮನುಷ್ಯರ ಮನದ ಪವಿತ್ರ ಅಭಿವ್ಯಕ್ತಿ.

ಸಹಾನುಭೂತಿ ಹೊಂದಿರುವುದರಿಂದ ಉಚ್ಚ ಮಟ್ಟದ ಜೀವನ ಹಾಗೂ ಮಾನವತೆಯ ವಾತಾವರಣ ದೊರೆಯುವುದು. ಇತರ ಅನುಭವಗಳ ಬಗ್ಗೆ ಸಹಾನುಭೂತಿ ಇರಿಸಿದರೆ ನಮ್ಮ ಜ್ಞಾನ ಹೆಚ್ಚುತ್ತದೆ. ಮತ್ತು ನಾವು ಬದುಕಿನಲ್ಲೂ ಸಫಲರೆನಿಸುತ್ತೇವೆ. ಆದ್ದರಿಂದ ಸಹಾನುಭೂತಿಯು ವರದಾನ ಎಲ್ಲರಲ್ಲೂ ಇರಲಿ ಎಂದು ನಾನು ಹಾರೈಸುತ್ತೇನೆ.

(ಹಿಂದಿಯಿಂದ)

---

# "ಕಡಲ ತೀರ"

—ಜೆ. ಬಿ. ಲಿಂಗರಾಜು, ಬಿ.ಎ;

ಆದಿನ ಸಂಜೆ ಕಡಲಿನ ತೀರದಿ
ಯಂತ್ರದ ದೋಣಿಯು ಸಾಗಿತ್ತು;
ನಾವೈವರಲ್ಲಿಗೆ ಧಾವಿಸಿ ಜೇಗದಿ
ಸಂಭ್ರಮ ತುಂಬಿದ ಚೆಲುವಿತ್ತು,

ದೋಣಿಯನೇರಿ ಕಡಲನುಸೇರಿ
ನಮ್ಮಾಪಯಣವು ನಡೆದಿತ್ತು;
ಹಾಯಿದೋಣಿ ಹಡಗನು ಸೇರಿ
ಕಡಲಾನುಡಿಲು ಸೊಬಗೆನಿಸಿತ್ತು.

ಮೈಸೂರೆನ್ನುವ ಕನ್ನಡ ಹಡಗೊಂದು
ನಡುನೀರಲ್ಲಿಯೇ ಚಲಿಸಿತ್ತು;
ಕೈ ಬೀಸುತ ಕಡಲಲೆಗಳು ನಿಂದು
ಕುಣಿ ಕುಣಿದಂತೆ ನಟಿಸಿತ್ತು,

ಚೆಲುವೊ ಚೆಲುವು ಆ ದಿನ ಸಂಜೆ!
ಮನವೆಂದಿಗೂ ತಾ ನೆನೆದಿತ್ತು,
ತಂಗಾಳಿಯು ಬೀಸಿ ತಂಪನ್ನೆರೆದು
ರಸಾನುಭವವನು ತಂದಿತ್ತು,

ಮುಳುಗವ ರವಿಯ ನೋಟವದೆನಿತು
ಕಣ್ಮನ ವೊಂದಾಗಿರಿಸಿತ್ತು;
ಜುಳು ಜುಳು ನೀರನು ಅಲೆಗಳು ಕಲೆತು
ಸ್ವಾಗತ ಗೀತೆಯದೆನಿಸಿತ್ತು,

ನೀಲಿಯ ಬಾನಿನ ರಮ್ಯತೆಯೊಂದಿಗೆ
ಸೊಗಸಿನ ಹಂದರವೆನಿಸಿತ್ತು.
ದೂರದಿ ಕಾಣುವ ನಾವೆಯ ನೋಟದಿ
ಸುಂದರ ನಗರವದೆನಿಸಿತ್ತು.



## ಅರ್ಥವೇನು? ಬದುಕಿಗೆ?

— ( ಕಿಂಕರ )

ಮನುಜ ಜೀವಕೆಷ್ಟು ಬಯಕೆ !
ಎಷ್ಟು ಆಸೆ, ಎಷ್ಟು ಮೋಹ !!
ಗಳಿಗೆ-ಉಳಿಕೆ ಎರಡೆ ಲೆಕ್ಕ-
ತಮ್ಮ ನಿತ್ಯ ಬಾಳಿಗೆ ॥ ೧ ॥

ಕಷ್ಟ-ನಷ್ಟ, ಒಂದೆ-ಎರಡೆ ?
ನಲಿವು-ನೋವು ಎಲ್ಲ ಒಂದೆ !
ಅಷ್ಟು ಇಷ್ಟು ಮುಗಿಯಿತೇನು ?
ಬೇಕು ಎಂಬ ಬಯಕೆಗೆ ! ॥ ೨ ॥

ಬಲವದೆಷ್ಟು ? ಛಲವದೆಷ್ಟು ?
ತಿಳಿದು ತಣಿವ ಮನವೆ ಇಲ್ಲ,
ಮತ್ತೆ ಪಡುವ ಸೊಲ್ಲೆ ಎಲ್ಲ-
ಬಯಕೆಯೊಂದೆ ಬಾಳಿಗೆ ! ॥ ೩ ॥

ಅನ್ನ-ಅರ್ಥ ಮುಗಿದುದಿಲ್ಲ,
ಕಾಮ-ಪ್ರೇಮ ತಣಿಯಲಿಲ್ಲ
ಮತ್ತೆ ಏನೊ- ಏನು ಬೇಕು ?
ಎಂಬ ಕೊರಗೆ ಮನಸಿಗೆ ॥ ೪ ॥

ಕೊಲೆಯದೆಷ್ಟೊ ? ಸುಲಿಗೆಯೆಷ್ಟೋ ?
ದಿನಕೆ - ದಿನವು ನಡೆವುದೆಷ್ಟೋ ?
ನಿತ್ಯ ಜೀವ ಮೊರೆವುದೆಷ್ಟೊ ?
ಅರ್ಥವೇನು ? ಬದುಕಿಗೆ ? ॥ ೫ ॥

ಇಲ್ಲಿ-ಅಲ್ಲಿ ನಡೆವುದೆಲ್ಲ
ಗೇಣು ಹೊಟ್ಟೆ ಪಾಡಿಗಾಗಿ !
ಕೋಪ-ತಾಪದೆಣಿಕೆಯೆಲ್ಲ-
ಮೂರು ಬಟ್ಟೆ ನಿಲುಮೆಗಾಗಿ !! ॥ ೬ ॥

ಇವನು ನಕ್ಕರವನು ಉರಿದ,
ಅವನ ನೋವಿಗಿವನು ನಲಿದ-
ಭಾವರಾಗದುಸಿರೆ ಎಲ್ಲ !
ಭುವಿಯ ಬಾಳ ಬಂಧನ. ॥ ೭ ॥

ಸಾಕು ಎಂಬ ಶಬ್ದವಿಲ್ಲ
ಬೇಕು ಎಂಬ ಪದವೆ ಇಲ್ಲ,
ಎಷ್ಟು ಇದ್ದರಷ್ಟು ಬೇಕು !
ಸಿಕ್ಕದಲ್ಲ ಲೆಕ್ಕಕೆ !! ॥ ೮ ॥

ಅವನ ಸೋಲೆ ಇವನ ಗೆಲುವು !
ಇವನ ಸಾವೆ ಅವನ ಬದುಕು !!
ಯಾರ ಹಾನಿ - ಯಾರ ಲಾಭ !!!
ಅರ್ಥವೇನು ? ಬದುಕಿಗೆ ! ॥ ೯ ॥

ನಿನ್ನೆ - ಇಂದು ನಾಳೆ ಎಲ್ಲ-
ಬೈಗು-ಬೆಳಗು ಎಲ್ಲ ಒಂದೆ !
ಅವರು ಇವರು ಎಂಬುವಲ್ಲಿ !!
ಸಾವು ಮರೆತ ಮನುಜಗೆ. ॥ ೧೦ ॥

ಹಗಲು ಹೋಯ್ತು ಬದುಕು ನಿತ್ಯ,
ಇರುಳು ಬಂತು ಸಾವು ಸತ್ಯ-
ಜನನ ಮರಣ ಜಗದ ನಿಯಮ
ತಿಳಿದರದುವೆ ಮನುಜಗೆ ! ॥ ೧೧ ॥

---

## ಜಾಗರಣೆ

—ಎಸ್. ಜಿ. ದಯಾಶಂಕರ್

ರಾತ್ರಿ ಎಲ್ಲಾ ಮಾಡಿದರು ಜಾಗರಣೆ
ಶಿವ ಕೊಡಲಿಲ್ಲ ಇವರಿಗೆ ಸೀಕರಣೆ.
ದ್ವೇಷಾಸೂಯೆಯ ಮೂಷೆ ಇವರಂತರಂಗ
ಸಾಧು - ಸತ್ಪುರುಷರಂತೆ ನಟನೆ ಬಹಿರಂಗ

# ರೈಲು ನಿಲ್ದಾಣ

## (ಲಲಿತ ಪ್ರಬಂಧ)

—ಎನ್. ಎಸ್. ಗದಗಕರ

ಚಿಕ್ಕ ಹಳ್ಳಿಗಾಗಲಿ, ದೊಡ್ಡ ಊರಿಗಾಗಲಿ ಜಟಕಾ, ಟಾಂಗಾ, ಮೋಟಾರುಗಳ ಉಲಿವು ಎಷ್ಟಿದ್ದರೂ ಕಣ್ಣಿಗೆ ಹಬ್ಬ ಎನಿಸಲಿಕ್ಕಿಲ್ಲ. ಮನದಲ್ಲಿ ಸಂತಸ ಉಕ್ಕಲಿಕ್ಕಿಲ್ಲ, ವಾತಾವರಣದ ವೈಭವದ ಆವಿರ್ಭಾವ ಎನಿಸಲಿಕ್ಕಿಲ್ಲ, ಅದೇ ಮುಂಜಾವು ಇರುಳು ಜನರು ತುಂಬಿದ ಒಂದು ರೈಲುಗಾಡಿ ಬಂದು ಹೋಗುತ್ತಿದ್ದರೆ ಅದರ ಥಾಟಿ ಬೇರೆ. ದಿನದಲ್ಲಿ ಅದು ಒಂದು ಸಲ ಜನರಿಗಾಗಿ ನಿಂತರೂ ಏನೂ ಪ್ರಮಾದವಾಗದು. ಬರುವುದೇ ತಡವಾಗಿ ಮರು ದಿನ ಬಂದರಾಗಲಿ, ಇಲ್ಲವೆ ಗೂಡ್ಸ್ ಗಾಡಿಯ ಆಗಮನವಾಗಲಿ, ಅಷ್ಟೆ ಉತ್ಸಾಹದ ಬುಗ್ಗೆ ಹೊರಹೊಮ್ಮಿತು. ನಾಗರಿಕತೆಯ ಸಾಕೇತವೆಂದರೆ ರೈಲುಗಾಡಿಯ ಸಂದರ್ಶನವೆಂದರೂ ಇಂದಿನ ಇಪ್ಪತ್ತನೆಯ ಶತಮಾನದಲ್ಲಿ ಸರಿಹೋದೀತು.

ಸರಿ ಅಂತಹ ಐಸಿರಿ, ಭಾಗ್ಯ ಇದರಿಂದೇನು ? ಎಂದು ಥಟ್ಟನೆ ಚಿಕಿತ್ಸಕ ವಾಚಕರು ಪ್ರಶ್ನೆ ಹಾಕುವ ಸಂಭವ ಉಂಟು. ನಿಲ್ದಾಣವೆಂದರೆ ಬರಿ ನಿಲ್ದಾಣವಾದೀತೇ ಊರಿಗೆ ? ಹಳ್ಳಿಯ ಸ್ಥಳಕ್ಕೆ ರೈಲು ನಿಲ್ದಾಣದಿಂದ ಹೊಸ ಪರಿಸರ ನಿರ್ಮಿತಿ ಆಗುವುದಿಲ್ಲವೆ ? ಅತಿ ಕನಿಷ್ಟವೆಂದರೆ, ಸಿರಿವಂತ ನಿರುದ್ಯೋಗಿಗಳು, ಅವರ ಪರಿವಾರ ಒಂದಿಲ್ಲೊಂದು ನೆವ ಮುಂದು ಮಾಡಿ ಅಲ್ಲಿಗೆ ಬಂದು ಹೋಗದಿದ್ದರೆ ಅವರ ಮನಸ್ಸಿಗೆ ಹುರುಹುರು ಎನಿಸುವುದುಂಟು. ಲಗ್ನ, ನಿಬ್ಬಣ ಇದ್ದಾಗಂತೂ ಕಾಯಿದೆಯಿಂದ ರಭಸ ಹೆಚ್ಚುವದು. ಒಂದೇ ಕೊಠಡಿಯ ಚಿಕ್ಕ ನಿಲ್ದಾಣದ ಸುತ್ತು ಮುತ್ತು ಕಾಣದ್ದೇನು ? ಕಂಡೆ ಮನದ ಕಣ್ಣೆದುರು ಚಿತ್ರ ಮೂಡಿಸಿಕೊಂಡರೂ ಪರವಾ ಇಲ್ಲ. ಇತ್ತ ಪಟ್ಟಣವೂ ಅಲ್ಲ, ಅತ್ತ ಹಾಳು ಹಳ್ಳಿಯೂ ಅಲ್ಲ—ಎಂಬಂತಹ ಊರಿಗೆ ರೈಲು ನಿಲ್ದಾಣವಿದ್ದುದಾದರೆ, ಅದರ ಅಕ್ಕಪಕ್ಕದಲ್ಲಿ ಚಹ ಮಕಾನ, ಬೀಡಿ ಅಂಗಡಿ, ವಾಕಿಂಗ್ ಕಂಪನಿ, ಸಲೂನ, ಕಿರಾಣಿ ಅಂಗಡಿ (ಕಾಳು ಕೂಡಿದ), ಕೊನೆಗೆ ಕೋರ್ಟ್ ಕಚೇರಿ ನಗರ ಸಭೆಗಳ ತ್ರಿವೇಣಿ ಸಂಗಮವಾದ ಕಟ್ಟಡವಂತೂ ಕೂಗಳತೆಯ ಅಂತರದಲ್ಲಿ ಕಾಣಲೇಬೇಕು. ಹಳ್ಳಿಗಳ ರೈಲು ನಿಲ್ದಾಣಗಳೇ ಇಂತಹ ಉತ್ಸುಕತೆಯ ಆಗರವಾದರೆ, ಪಟ್ಟಣಗಳ ರೈಲು ತಾಣಗಳ ಮಾತೆತ್ತುವುದೇ ಅನಾವಶ್ಯಕ, ಅವ್ಯವಹಾರ್ಯ !

ಅಹುದು. ನಿಲ್ದಾಣಗಳು ಚಿಕ್ಕವಿರಲಿ, ದೊಡ್ಡವಿರಲಿ, ಅವುಗಳ ಅಂಗ ಉಪಾಂಗಗಳಿಗೆ ಕೊರತೆ ಬರುವುದೇ ಇಲ್ಲ. ಮೊಟ್ಟಮೊದಲು ಪರದೇಶಕ್ಕೆ ಹೊರಡುವವರಿಗೆ ಪಾಸ್‌ಪೋರ್ಟ್ ಅವಶ್ಯವಿರುವಂತೆ, ಪ್ರಯಾಣಕ್ಕೆ ಯೋಗ್ಯತೆ ತರುವಂತೆ ಮಾಡಲು ಒಂದು ಬುಕಿಂಗ್ ಆಫೀಸು ಅಲ್ಲಿ ಇದ್ದೇ ಇರುವದು. ಅವಸರದಲ್ಲಿ ಅಲ್ಲಿ ಸವಕಳಿ ನಾಣ್ಯ ದಾಟಿಸುವದು, ಕಡಿಮೆ ಹಣ–ಹೆಚ್ಚು ಹಣದ ಗಲಭೆಯಲ್ಲಿ ಬೀಳುವುದು ಅಥವಾ ವಿಚಾರದ ಗಾಂಭೀರ್ಯ ಕೋಲಾಹಲದಲ್ಲಿ ಅದೇ ಊರು ಟಿಕೇಟು ಬೇಡುವದು–ತೀರ ಸಾಮಾನ್ಯ ಸಂಗತಿಗಳು. ಹೀಗೆ ಹೇಗೊ ಟಿಕೇಟ್ ಕೊಂಡು ಪ್ರವಾಸಿಯು ಒಳಗೆ—ಪ್ಲಾಟಫಾರ್ಮಿಗೆ—ಹೋದಾಗ—ವೇಳೆ ಇದ್ದರೆ ಅವನು (ಅವಳು) ಅಲ್ಲಿಯ ಚಹ–ತಿನಿಸಿಗಾಗಿ ಮನಸು ಮಾಡುವನು(ವಳು). ಅವುಗಳ ದರ, ಗುಣಗಳೋ ? ಜಗತ್ತಿಗೇ ಹೊರತು ! ಬಹಳ ಒಡವೆಗಳಿದ್ದು ವಿರಾಮದಿಂದ ಹೊರಡಬೇಕೆನ್ನುವವರಿಗೆ ಪಾರ್ಸಲ್ ಆಫೀಸ್, ಗೂಡ್ಸ್‌ಗೇಟ್ ಇವುಗಳ ಸಂಪರ್ಕ ತಪ್ಪದು. ಕೇವಲ ನಿರೀಕ್ಷಣೆ, ಕಾಲಹರಣಕ್ಕೆಂದು ಬಂದವರಿಗೆ ಪುಕ್ಕಟೆಯಾಗಿ ಓದಿಹೋಗಲು ಬುಕ್‌ಸ್ಟಾಲ್ ವಿರಾಜಿಸುವುದು. ಆಗೀಗ ಅಲೆದಾಡುವ ನಮ್ಮ ರೈಲು ಅಧಿಕಾರಿ ವರ್ಗದ ಅಧಿಕಾರಿಗಳ ಭಾದೆಯೊ? ಮೂಲ ಇಂಗ್ಲರು ಅದನ್ನು ಕೇಳಿ ಎದೆಯೊಡೆದುಕೊಳ್ಳುವಂತಾದರೂ, ಇವರು ಕಿರುಕುಳ ತಪ್ಪಿದಾಗ—"you may guard me ; under guard me ; but please do not porter me" ಎಂದು ಉದ್ಗಾರ ತೆಗೆಯುವದು ತೀರ ಸಾಮಾನ್ಯ ರಂಜಕದೃಶ್ಯ ! ಅಲ್ಲಿಯ ಸಾರಸ್ವತ ಪ್ರಪಂಚವೊ ? ಕಂಡೇ ಸಂತಸ

ಬೇಕು. ಸ್ವಭಾಷೆ-ಪರಭಾಷೆಗಳ ಲೋಕಪ್ರಿಯ (?) ಸಾಪ್ತಾಹಿಕ, ಮಾಸಿಕ, ದೈನಿಕಗಳು ಒಂದೆಡೆ ಒರಗಿದ್ದರೆ, ಸ್ಯಾಂಪಲ್ ಎಂದು ಒಂದೊ ಎರಡೊ ಇರುವ ಪತ್ತೇದಾರಿ ಕಾದಂಬರಿಗಳು, ಸಣ್ಣ ಕತೆಗಳು (ಕವನಗಳು ಔಷಧಕ್ಕೆ ಮಾತ್ರ !) ಬೇರೆಡೆಗೆ ಅವಿತು ಕುಳಿತು ರಸಿಕ ವಾಚಕರ ಕಣ್ಮನ ಸೆಳೆಯುವುವು. ಉಚ್ಚ ಪೀಠವನ್ನೇರಿದ ಇತರ ಹೊತ್ತಿಗೆಗಳನ್ನು ಮರೆತರೆ ರಸದೂಟಕ್ಕೆ ಎರವಾದಂತೆ ! ವಾತ್ಸಾಯನನ ಕಾಮಸೂತ್ರ, ಹಸ್ತ ಸಾಮುದ್ರಿಕ ಗ್ರಂಥ, ಚರಿತ್ರೆಗಳನ್ನು ಮೊದಲ್ಗೊಂಡು 'confessions of a London prostitute'' ಮತ್ತು "How to make friends'' ವರೆಗೆ ಪುಸ್ತಕಗಳ ವಿಸ್ತಾರ, ವೈವಿಧ್ಯವಿರುವುದುಂಟು. ಆಗೀಗಿನ ಕಡಿಮೆ ಬೆಲೆಯ ಭಗವದ್ಗೀತೆ, ರೂಪಾಯಿಯಿಂದ ಆರಂಭಿಸಿ ನಾಲ್ಕು ಆಣೆ ವರೆಗೆ ಏರುವ ಆಕರ್ಷಕ (?) ಗದ್ಯ ವಾಙ್ಮಯ ಹೊತ್ತಿಗೆ ಗಳಿಗೆ ಲೆಕ್ಕವೆ ಇಲ್ಲ. ನಿಲ್ದಾಣದ ಸೀಮೆಗಳೊಳಗೆ ಗಾಡಿ ಯನ್ನು ಬಿಡುವ ಸಿಗ್ನಲ್ ಕೊಡುವ ತರಾತುರಿ, ಅದೇ ಗಾಡಿ ಬಂದಾಗಿನ ಕೂಲಿಯವರ ಉಪಟಳ ಹೊರತು ಪಡಿಸಿದರೆ, ಉಳಿದ ದಿನದ ಕಾಲಾವಧಿಯಲ್ಲಿ ನಿಲ್ದಾಣವು ಸಂತೆ ಬಯಲಾದ ಪೇಟೆಯ ಸ್ಥಳದಂತೆ ಕೊಂಚ ಕಾಲ ಹಾಳು ಸುರಿಯುವುದೆಂದು ಹೇಳದೆ ವಿಧಿ ಇಲ್ಲ. ಆಂಗ್ಲ ನುಡಿಯಲ್ಲಿ ನುಡಿಯಬೇಕಾದರೆ "Like a deserted banquet hall'' ಎಂಬ ಉಪಮೆ ಉಸಿರಬಹುದು. ಬಂಧು-ಬಳಗದವರನ್ನು ಆಸೆಯಿಂದ ಬೀಳ್ಕೊಡಲು ಬಂದ ವರ, ಕೀರ ಸಂಬಂಧಿಕರ ಸಮ್ಮಿಶ್ರ ರಸ ವಿರಸಗಳ ಭಾವನೆ ಗಳನ್ನು ಮನೋಭೂಮಿಕೆಯನ್ನು ಮರೆತರೆ, ಗಾಡಿ ಹೋದೊಡನೆ ಉಳಿದದ್ದೇನು ?—ಎಂದು ಕೇಳಿದರೆ ತಪ್ಪಲ್ಲ !

ರೈಲು ನಿಲ್ದಾಣದ ಸ್ವೈಜ ವಿಶ್ವರೂಪ ಕಂಡು ರಸ ನಿವಿಷಗಳನ್ನು ನಾವು ಅನುಭವಿಸುವದು ಗಾಡಿ ಬಂದಾಗಲೆ ಎಂದು ನಿಸ್ಸಂಕೋಚವಾಗಿ ಹೇಳಬಹುದು. ಬರುವಾಗಲಾದರೂ ಅದರ ಅಬ್ಬರ ಎಷ್ಟು! ಒಮ್ಮೊಮ್ಮೆ "ಧಡ್ ಧಡ್ ಧಡ್ ಧಡ್'' ಎಂಬ ನಿಸ್ವನದೊಡನೆ ಬಂದು ನಿಂತು ರಾಕ್ಷಸಾ, ಯಕ್ಷಿಣಿಯರ ವೇಗ ನಾಚಿಸಿ ದರೆ, ಬೇರೊಂದು ಸಲ ನವವಧುವಿನ ನೂಪುರದ ಝಣ ತ್ಕಾರದ ಮಂಜುಳರವದಿಂದೇನೊ ಎನ್ನುವಂತೆ "ಜಗ್ ಜಗ್ ಝುಕು ಝುಕು'' ಎಂಬ ದನಿಯೊಡನೆ ಪ್ಲಾಟ ಫಾರ್ಮಿಗೆ ಬಂದು ತಲುಪುವುದು. ಇಂತಹ ತಾಳ ಲಯ ಬದ್ಧತೆಗೆ ಮನಸೋತೇ ಹಿರಿಯರು ಕಿರಿಯರು ಇದಕ್ಕಾಗಿ ಮಾರುಹೋಗಿರುವರು. ಹೀಗೆ ಗಾಡಿ ಒಮ್ಮೆ ಒನತಿನಿಂದ ಬಂದು ನಿಂತಿರುವುದೇ ತಡ ಸಪ್ತಸ್ವರಗಳು ಕಿವಿಗಡಚಿಕ್ಕಿಸು ವವು. ಹತ್ತುವವರ ಗೋಳನ್ನಂತೂ—ಅತಿ ಗದ್ದಲ ವಿದ್ದು—ಇರುವೆಗೂ ಇಂಬು ಇರದಾಗ—ದೇವರೇ ಬಲ್ಲ! ಈ ಮೊದಲೆ ಒಳಗಿದ್ದು ಸುಖಸೀನರಾದವರು, ತಮ್ಮ ಹಿಂದಿನ ತೊಂದರೆ ನೆನಸಿಕೊಂಡು ಬೇಕೆಂತಲೇ ಉಪಕಾರ ಬುದ್ಧಿಯನ್ನು ಮುಂದುಮಾಡರು. ಹಲವರು ಸ್ನೇಹ ಸಹಾನುಭೂತಿಯಿಂದ—ಹೇಗೊ, ಒಳನುಗ್ಗಿದವರಿಗೆ ಸಹಾಯ ಸಲ್ಲಿಸಲು ಮುಂದುವರಿದು ಹೋದರೆ, 'ಹಃ! ಕರ್ಣನ ತುಂಡು' ಎಂದು ಉಪಹಾಸದ ಉದ್ಗಾರ ಹೊರಡುವದು. ಏನೇ ಆಗಲಿ, ಹತ್ತುವವರಿಗಾಗಲಿ ಇಳಿಯುವವರಿಗಾಗಲಿ ಗಾಡಿಯ ಒಳಗೆ ಇದ್ದಷ್ಟು ವೇಳೆ ಜೀವನದ ವಿವಿಧ ರಾಗಗಳ ಅನುಭವ, ಸಂಪರ್ಕ ಬಂದೇ ತೀರುವುದರಲ್ಲಿ ಸಂದೇಹವೇನು ? ಅಂತೇ 'Travel as a part of education' ಎಂದು ಬಲ್ಲವರು ಸಾರಿರಬಹುದೆ ? ಈ ಮಾತಿನ ನಿದರ್ಶನ ಇನ್ನೂ ಕಾಣ ಬೇಕಾದವರು ಗಾಡಿಯೊಳಗಿನ ಚಿಕ್ಕ ಪ್ರಪಂಚದ ಚಟು ವಟಿಕೆ ನಿರೀಕ್ಷಿಸಲಿ. ಒಂದು ಚಿತ್ರಪಟದ ಕಥಾನಕವನ್ನಾ ಗಲಿ, ನಾಟಕ ಕಾದಂಬರಿಯ ವಸ್ತುಗಳನ್ನಾಗಲಿ ಅಲ್ಲಿ ನಡೆಯುವ ಮಾತುಕತೆಯ ರಸವಂತಿಕೆಯ ಮುಂದೆ ನಿವಾಳಿಸಿ ಚೆಲ್ಲಬೇಕು. ಒಬ್ಬರು ಮದುವೆಗಾಗಿ ಪರಿವಾರ ದೊಡನೆ ಉನ್ಮಾದದಿಂದ ಹೊರಟಿದ್ದರೆ, ಬೇರೆಯವರು ಮನದ ಬೇಜಾರ ಕಳೆದುಕೊಳ್ಳಲು ಪ್ರವಾಸ ಕೈಕೊಂಡಿರು ವದು. ನವ ದಂಪತಿಗಳು ಚಿಕ್ಕ ಮಗುವಿನೊಡನೆ ತಮ್ಮ ನೌಕರಿಯ ನಗರಕ್ಕೆ ಹೊರಟಿರುವರು. ಶಾಲೆ ಕಾಲೇಜುಗಳ ಪರೀಕ್ಷೆಯ ಹಾವಳಿ ತೀರಿತೆಂದು ಹಾಯಾಗಿ ಹಲವು ತರುಣರು ತಮ್ಮೂರಿಗೆ ನಗುತ್ತ ಕೆಲೆಯುತ್ತ ಬೇರೊಂದು ಡಬ್ಬಿಯಲ್ಲಿ ಸಾಗಿದ್ದರೆ, ಅತ್ತೆಯ ಮನೆಗೆ ಗರತಿಯೊಬ್ಬಳು ಕಣ್ಣೀರಿನ ಕಾಲುವೆ ಹರಿಸುತ್ತ ಅಲ್ಲಿಯೇ ನಡೆದಿರುವಳು, ಅದೋ ಅಲ್ಲಿ ಕಿಟಕಿಯ ಬಳಿ ನೇಗಿಲ ದೊಡೆಯನ ಪರಿವಾರವು ಕುಳಿತಿದೆ, ಎಲೆ ಅಡಿಕೆ ತಂಬಾ ಕಿನ (ಹೊಗೆಸೊಪ್ಪು) ವೈಭವದಲ್ಲಿ, ಹೊಲ ಮನೆ ಸಂಸಾ ರದ ಸಂಭಾಷಣೆಯ ಉತ್ಸಾಹದಲ್ಲಿ ಸುತ್ತುಮುತ್ತಲಿನ

ಪರಿವೆಯೇ ಅದಕ್ಕಿಲ್ಲ. ಊಹಾ ಲೋಕದಲ್ಲಿ ಅವರ ವಿಹಾರ. ಅವರ ದೈನಂದಿನ ಜೀವನ ಮುಚ್ಚುಮರೆ ಇಲ್ಲದ ನಿರಾಡಾಂಬರ, ಅತಿ ಸರಳ. ಈ ರಂಗಭೂಮಿ ಯಲ್ಲಿಯೇ ಆಗೀಗ ಕುರುಡ ಕುಂಟ ಭಿಕ್ಷುಕ-ಭಿಕ್ಷುಕಿಯರು ತಮ್ಮ ಸಂಗೀತಲಹರಿಯಲ್ಲಿ ಜನಜಂಗುಳಿಯನ್ನು ಮುಳು ಗಿಸಿಬಿಡುವರು. ಯಾವಾಗಲೂ ಈ ಸ್ತ್ರೀ ಪುರುಷರ (ಮಕ್ಕಳಿಗೂ ಕೂಡ) ಸಂಗೀತ ಬೆನ್ನು ಎಂದು ಹೇಳ ಲಾಗದಿದ್ದರೂ ಬ್ರಹ್ಮಸೃಷ್ಟಿಯ ಚಮತ್ಕಾರ ಎಂದರೆ, ಆಗೀಗ ಅಲ್ಲಿ ದೇದಿಪ್ಯಮಾನ ತಾರೆಗಳು ಮಿನುಗಿಹೋಗು ವದು ಅಚ್ಚರಿಯ ಮಾತಲ್ಲ ! ಟೂಥ್‌ಪೌಡರ್, ಕಸ್ತೂರಿ ಮಾತ್ರೆ, ಪೆಪ್ಪರ್‌ಮೆಂಟ್, ಹುರಿಗಡಲೆ, ಸೇಂಗಾ ಮಾರು ವವರ ಉಪಟಳವನ್ನಂತೂ ಹೇಳಲಾಗಲ್ಲ. ಗಾಡಿಯು ವೇಗದಿಂದ ಸಾಗಿದಾಗಲೆ ಡಬ್ಬಿಯಿಂದ ಡಬ್ಬಿಗೆ ಧುಮು ಕುವ ಅವರ ಆ ಲೀಲಾ ಪ್ರಸಂಗವನ್ನು ಕಂಡವರು ಸರ್ಕ ಸ್ಸಿನ ಕೆಲಸಗಾರರನ್ನು ತುಚ್ಛೀಕರಿಸಿದರೇನು ಪಾಪ ?

"ಬದುಕು ರೈಲಿನ ಬಂಡಿ, ಗಾರ್ಡ್ ಅದರ ಸಾಹೇಬ" ಎಂದು ಡಿ. ವಿ. ಗುಂಡಪ್ಪನವರ ನುಡಿಯನ್ನು ವ್ಯತ್ಯಾಸ ಮಾಡಿ ಹೇಳಿದರೆ ರೈಲು ನಿಲ್ದಾಣದ ಐಸಿರಿಯ ಕಲ್ಪನೆ ಮಿಂಚೀತು. ಅಲ್ಲಿಯ ಗಾರ್ಡ್, ಡ್ರೈಯ್‌ವ್ಹರ್ ಆ ಯಂತ್ರ ಎಲ್ಲ ಕರ್ಮಯೋಗದ ಉಪಾಸನೆ ನಡಿಸಿರು ವಂತೆ ತೋರುವುದು. ಚಿಕ್ಕಿ, ಚಂದ್ರಮ, ಸೂರ್ಯರ ಗತಿಗೆ ತೊಡಕಾದರೂ ಆದೀತು, ಆದರೆ ಅವರ ವ್ಯಾಪಾರ ಮಾತ್ರ ನಿರಂತರವಾಗಿ ಸಾಗಿಯೇ ತೀರುವುದು. ಗಾಡಿ ತಾಸಿಗೆ ತಾಸೇಕೆ, ದಿವಸಕ್ಕೆ ದಿವಸ ತಡವಾದರೂ—ಅ ಕಾರ್ಯರಂಗದಲ್ಲಿ ಹೆಚ್ಚುಕಡಿಮೆ ಏನು ಆದೀತು ? ಹೊರಡುವಾಗ ರೈಲುಗಾಡಿ ಸಿಳ್ಳುಹಾಕುವುದು, ಗಾರ್ಡ್ ಹಸಿರು ನಿಶಾಳೆ ತೋರುವುದು ಸಿಗ್ನಲ್ ಬೀಳುವುದು— ಎಲ್ಲ ಖಟ್ಟುನಿಟ್ಟು ನಿಯಮಗಳು ಚಾಚೂ ತಪ್ಪದೆ ನಡೆಯುವುವು. ಕೊನೆಗೆ ಮಾನವ ಸ್ವಭಾವ ಸಂದರ್ಶ ನಕ್ಕೆ, ಸಾಂಸ್ಕೃತಿಕ ಪ್ರಸಾರಕ್ಕೆ, ನವನಾಗರೀಕತೆಯ ನಿರ್ಮಾಣಕ್ಕೆ, ತಾತ್ವಿಕ ವಿವೇಚನೆಯ ದರ್ಶನಕ್ಕೆ ಇದು ಸ್ಫೂರ್ತಿಯ ಆಗರ ಎಂದು ಹೇಳಿದರೆ ರೈಲು ನಿಲ್ದಾಣದ ಭವ್ಯತೆ, ದಿವ್ಯತೆ ಉಸುರಿದಂತಾಗಲಿಕ್ಕಿಲ್ಲವೆ ? ಅಲ್ಲಿಯ ಜನಜೀವನದ ಭಾಷೆ, ವೇಷ, ಭೂಷ, ಚಟುವಟಿಕೆಯ ವೈಖರಿ ಕಣ್ಣು ಮುಂದೆ ತಂದುಕೊಂಡರಂತೂ ರೈಲು ನಿಲ್ದಾಣವು ಸಾಮಾಜಿಕ ನಾಟಕದ ರಂಗಭೂಮಿಯೆ ! ನಿಸರ್ಗದ ಮಡಿಲಲ್ಲಿ ಶೂನ್ಯದೊಡನೆ ಐಕ್ಯ ಹೊಂದುವ ಆ ಬೆಳ್ಳಿಯೋಪಾದಿಯ ಜೋಡು ಹಳಿಗಳುಳ್ಳ ನಿರಂತರ ಓಡುವ ಊಗಿಬಂಡಿಯು, ಜಗಚ್ಚಕ್ರದ ಸಜೀವ ಪ್ರತೀಕವಲ್ಲವೆ ? ಇದೀಗ ರೈಲು ನಿಲ್ದಾಣದ ರೋಮಾಂಚ ಕತೆ, ಕಲಾಕಲ್ಪಕತೆ ಸಂಮ್ಮೋಹಕತೆ ! —

# ನಿಸರ್ಗ ಚಿಕಿತ್ಸೆ

—ಎಂ. ಗಣೇಶ್

ವೈದ್ಯಕೀಯ ಪ್ರಪಂಚಕ್ಕೆ ಭಾರತವು ನೀಡಿದ ಕೊಡುಗೆಗಳು ಅಸಾಮಾನ್ಯವೂ, ಅಸಂಖ್ಯಾತವೂ ಆಗಿದೆ. ಆದರೆ ಭಾರತೀಯರ ದುರದೃಷ್ಟದಿಂದ ಅನೇಕ ರೀತಿಯ ಪ್ರಾಚೀನ ಭಾರತದ ವೈದ್ಯಕೀಯ ಸಂಶೋಧನೆಗಳು, ಹಲವು ರೀತಿಯ ವೈದ್ಯಕೀಯ ಚಿಕಿತ್ಸಾ ಸಾಧನಗಳ ವಿಶ್ವದ ಜನರ ಕಣ್ಣಿಂದ ಮರೆಯಾಗುತ್ತದೆ.

ಹಾಗಿದ್ದರೂ ಸಹ ಈಗೀಗ ಸರಕಾರವು ಕೆಲವಾರು ಸ್ತುತ್ಯ ಕೆಲಸಗಳನ್ನು ಮಾಡಿ ಭಾರತೀಯ ವೈದ್ಯ ವಿಜ್ಞಾನವನ್ನು ಅಭಿವೃದ್ಧಿಗೊಳಿಸಲೆತ್ನಿಸುತ್ತಿದೆ. ಅದರ ಪ್ರತೀಕವಾಗಿ ಅನೇಕ ಮುಂದುವರಿದ ರಾಜ್ಯಗಳಲ್ಲಿ "ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಮೆಡಿಸಿನ್ ( Institute of Indian Medicine )" ಸಂಸ್ಥೆಗಳು ಜನ್ಮತಾಳುತ್ತಿವೆ. ಆದರೆ ಇಂತಹ ಅನೇಕ ಸಂಸ್ಥೆಗಳಲ್ಲೂ ಸಹ ಇಂದಿಗೂ ಹೆಚ್ಚಿಗೆ ಅಭಿವೃಧ್ಧಿ ಹೊಂದಿದ ವೈದ್ಯ ವಿಜ್ಞಾನಗಳಲ್ಲಿ " ನಿಸರ್ಗ ಚಿಕಿತ್ಸೆ " ಇಂದಾಗಿದೆ.

## ನಿಸರ್ಗ ಚಿಕಿತ್ಸೆ

ನಿಸರ್ಗ ಚಿಕಿತ್ಸೆ ಅಥವಾ ಪ್ರಕೃತಿ ಚಿಕಿತ್ಸೆ ಅಥವಾ Nature Cure ನಲ್ಲಿ ಯಾವ ರಾಸಾಯನಿಕ ಔಷಧಿಗಳನ್ನು ಬಳಸುವುದಿಲ್ಲ. ಇಲ್ಲಿ ಬಳಸುವುದೆಲ್ಲಾ ನಿಸರ್ಗದತ್ತವಾದವುಗಳು. ಮಣ್ಣು, ನೀರು, ಗಾಳಿ, ಸೂರ್ಯನ ಕಿರಣಗಳು ಮತ್ತು ಆಕಾಶಗಳೆಂಬ ಐದು ನಿಸರ್ಗದತ್ತ ವಸ್ತುಗಳಿಂದ ನಿಸರ್ಗ ಚಿಕಿತ್ಸೆಯನ್ನು ಮಾಡುತ್ತಾರೆ.

ಮೇಲೆ ಹೇಳಿದ ಐದು ವಸ್ತುಗಳನ್ನೊಳಗೊಂಡಂತೆ ಕೆಲವಾರು ಸಾಧನಗಳಿಂದ ರೋಗಗಳನ್ನು ನಿವಾರಿಸುತ್ತಾರೆ. ಅವುಗಳು ಯಾವುವೆಂದರೆ: ಮಣ್ಣಿನ ಪಟ್ಟಿ ಮಣ್ಣಿನ ಸ್ನಾನ, ತೊಟ್ಟಿ ಸ್ನಾನ, ಬೆನ್ನು ಹುರಿಯ ಸ್ನಾನ, ಉಗಿಯ ಸ್ನಾನ, ಪಾದ ಸ್ನಾನ, ಉಪವಾಸ ಚಿಕಿತ್ಸೆ.

ಮಣ್ಣಿನ ಚಿಕಿತ್ಸೆಗಳು :- ಮಣ್ಣಿನಿಂದ ಕೆಲವಾರು ಸಾಧನಗಳ ಮೂಲಕ ಕೆಲವು ರೋಗಗಳನ್ನು ವಾಸಿಮಾಡುತ್ತಾರೆ. ಇವುಗಳಲ್ಲಿ ಮುಖ್ಯವಾದುದ್ದು ಮಣ್ಣಿನ ಪಟ್ಟಿ ಮತ್ತು ಮಣ್ಣಿನ ಸ್ನಾನ.

ಮಣ್ಣಿನ ಪಟ್ಟಿ :- ಸುಮಾರು 1½ ಅಡಿ ಉದ್ದ 1 ಅಡಿ ಅಗಲವಿರುವ ಬಟ್ಟೆಯ ಮಧ್ಯಭಾಗದಲ್ಲಿ ½ ಅಂಗುಲದಷ್ಟು ಎತ್ತರವಿರುವಂತೆ, ಕೆರೆಯ 'ಕಿನಾರೆ' (ದಡ) ದಲ್ಲಿ ಸಿಗುವ ಒದ್ದೆ ಮರಳನ್ನು ಹಾಸ ಬೇಕು. ನಂತರ ಈ ಪಟ್ಟಿಯನ್ನು ಮಲಬದ್ಧತೆ, ಕರುಳಿನ ರೋಗ ಟೈಪಾಯಿಡ್‌ಗಳು ಬಂದ ಸಂದರ್ಭದಲ್ಲಿ ಹೊಟ್ಟೆಯ ಸುತ್ತ ಇಟ್ಟು ಉಣ್ಣೆಯ ರಗ್ಗನ್ನು ಇದರ ಮೇಲೆ ಸುತ್ತಬೇಕು. ಸುಮಾರು ೧೫ ರಿಂದ ೩೦ ನಿಮಿಷಗಳವರೆಗೆ ದಿನಕ್ಕೊಂದು ಭಾರಿಯಂತೆ ೧೦-೧೫ ದಿನಗಳವರೆಗೆ ಮಾಡಿದಲ್ಲಿ ಮೇಲೆ ತಿಳಿಸಿದ ರೋಗಗಳು ವಾಸಿಯಾಗುತ್ತವೆ.

ಮಣ್ಣಿನ ಸ್ನಾನ :- ಮಣ್ಣಿನ ಸ್ನಾನವೆಂದರೆ ಮಣ್ಣನ್ನು ನೀರಿನಂತೆ ಸುರಿದು ಕೊಳ್ಳುವುದಲ್ಲ. ಕೆರೆ, ನದಿಗಳ ದಡದಲ್ಲಿ ಸಿಗುವ ಮರಳನ್ನು ಸ್ವಲ್ಪ ನೀರಿನೊಂದಿಗೆ ಬೆರೆಸಿ ಇದನ್ನು ದೇಹದ ಮೇಲೆ ಮೆತ್ತುವುದಕ್ಕೆ ಮಣ್ಣಿನ ಸ್ನಾನವೆನ್ನುತ್ತಾರೆ.

ಈ ರೀತಿಯ ಮಣ್ಣನ್ನು ಹಾವು ಕಚ್ಚಿದಾಗ, ಕಡಿದ ಭಾಗದ ಸುತ್ತ (ಸ್ವಲ್ಪ ಜಾಗ ಬಿಟ್ಟು) ಮತ್ತೆ ಕಡಿದವನನ್ನು ಉಳಿಸ ಬಹುದು.

ನೀರಿನ ಚಿಕಿತ್ಸೆ :- ನೀರಿನ ಚಿಕಿತ್ಸೆಗಳಲ್ಲಿ ಮುಖ್ಯವಾಗಿ ತೊಟ್ಟಿ ಸ್ನಾನ, ಬೆನ್ನು ಹುರಿಯ ಸ್ನಾತ, ಉಗಿಯ ಸ್ನಾನ, ಪಾದ ಸ್ನಾನ, ಒದ್ದೆ ಬಟ್ಟೆಯ ಪಟ್ಟಿ, ಬಿಸಿನೀರಿನ ಚಿಕಿತ್ಸೆ ಎಂಬುದಾಗಿ ಹಲವು ವಿಧಾನಗಳನ್ನನುಸರಿಸಿ ರೋಗಗಳನ್ನು ಗುಣಪಡಿಸುತ್ತಾರೆ.

ತೊಟ್ಟಿಯ ಸ್ನಾನದಲ್ಲಿ ತಣ್ಣೀರಿನ ಸ್ನಾನ ಮತ್ತು ಬಿಸಿನೀರಿನ ಸ್ನಾನ ಎಂಬುದಾಗಿ ಎರಡು ವಿಧಗಳಿವೆ.

ಒಂದು ಸ್ನಾನ ತೊಟ್ಟಿ ( Bath-Tub ) ಯಲ್ಲಿ ಕಾಲು ಭಾಗದಷ್ಟು ಬಿಸಿನೀರನು ಹಾಕಿ ಅದ ರಲ್ಲಿ ರೋಗ ಪೀಡಿತರನ್ನು ತಲೆಯ ( ಮುಖವು ) ನೀರಿನಿಂದ ಹೊರಗಿದ್ದು, ಹೊಟ್ಟೆ ಮತ್ತು ಅರ್ಧ ತೊಡೆ ಗಳು ನೀರಲ್ಲಿ ಮುಳುಗಿದ್ದು, ಕಾಲುಗಳನ್ನು ತೊಟ್ಟಿ ಯಿಂದ ಹೊರಗೆ ಇಳಿ ಬಿಡಬೇಕು. ಪಾತ್ರೆಯೊಂದ ರಲ್ಲಿ ತಣ್ಣೀರನ್ನು ಹಾಕಿ ಹೀಗೆ ಇಳಿಬಿಟ್ಟ ಪಾದಗಳನ್ನು ಈ ಪಾತ್ರೆಯಲ್ಲಿ ಇಡಬೇಕು. ಆರಾಮ ಕುರ್ಚಿಯಲ್ಲಿ ಕುಳಿತುಕೊಳ್ಳುವ ರೀತಿ ತಲೆಗೆ ಒಂದು ಒದ್ದೆಬಟ್ಟೆಯ ಪಟ್ಟಿಯನ್ನು ಸುತ್ತಬೇಕು. ಈ ರೀತಿ ೧೦-೧೫ ನಿಮಿಷಗಳ ಚಿಕಿತ್ಸೆಮಾಡುವುದರಿಂದ ಪಚನಾಂಗವು ಶುದ್ಧ ವಾಗುತ್ತದೆ. ರಕ್ತ ಪರಿಚಲನೆಯು ಸರಾಗವಾಗಿ ನಡೆ ಯುತ್ತದೆ- ನರಗಳ ದೌರ್ಬಲ್ಯವು ವಾಸಿಯಾಗುತ್ತದೆ.

ಮೇಲೆ ಹೇಳಿದ ರೀತಿಯನ್ನೇ ಅನುಸರಿಸಿ, ಆದರೆ ತೊಟ್ಟಿಯಲ್ಲಿ ತಣ್ಣೀರನ್ನು ಹಾಕಿ ಕಾಲಬಳಿಯ ಪಾತ್ರೆಯಲ್ಲಿ ಮತ್ತು ತಲೆಗೆ ಕಟ್ಟುವ ಬಟ್ಟೆಯಲ್ಲಿ ಬಿಸಿ ನೀರನ್ನು ಉಪಯೋಗಿಸಿ ಚಿಕಿತ್ಸೆ ನಡೆಸುವುದರಿಂದ ಹೊಟ್ಟೆ ಹುಣ್ಣು, ಕರುಳಿನ ಹುಣ್ಣು, ಕಾಮಾಲೆ ರೋಗ ವಿಷಮ ಶೀತ ಜ್ವರ ಮತ್ತು ಮಲೇರಿಯಾ ರೋಗಗ ಳನ್ನು ಗುಣಪಡಿಸಬಹುದು. ಆದರೆ ಈ ಚಿಕಿತ್ಸೆಯಲ್ಲಿ ತಾಳ್ಮೆಯಿರಬೇಕಾದುದು ಅವಶ್ಯವಾದುದು. ಈ ಚಿಕಿತ್ಸೆಯನ್ನು ೧-೨ ದಿನ ಮಾಡುವುದರಿಂದ ಯಾವ ಪರಿಣಾಮವು ಕಂಡು ಬರಲಾರದು. ಸುಮಾರು ೧೦-೧೫ ದಿನಗಳವರೆವಿಗಾದರೂ ಮಾಡಬೇಕು.

ಮೇಲೆ ಹೇಳಿದ ತೊಟ್ಟಿಯ ಸ್ನಾನದಂತೆಯೇ ನಡೆಸಬಹುದು. ಈ ಚಿಕಿತ್ಸೆಯಲ್ಲೂ ಅದೇ ತೊಟ್ಟಿ ಯಲ್ಲಿ, ಅದೇ ಪ್ರಮಾಣದಲ್ಲಿ ಬಿಸಿ ಅಥವಾ ತಣ್ಣೀರನ್ನು ತುಂಬಿ, ಕತ್ತು ಮಾತ್ರ ಬಿಟ್ಟು ಬೆನ್ನನ್ನು ಸಂಪೂರ್ಣವಾಗಿ ನೀರಿನಲ್ಲಿ ಮುಳುಗಿಸಬೇಕು. ಕಾಲುಗಳನ್ನು ಹೊರಬಿಟ್ಟು ಮತ್ತೊಂದು ಸಣ್ಣ ಪಾತ್ರೆಯಲ್ಲಿ ನೀರು ತುಂಬಿ ಅದರಲ್ಲಿಟ್ಟಿರಬೇಕು. ಈ ರೀತಿ ೧೦-೧೫ ನಿಮಿಷಗಳವರೆಗೆ ಮಾಡುವುದರಿಂದ ಜ್ಞಾಪಕ ಶಕ್ತಿ ಹೆಚ್ಚುತ್ತದೆ, ಮಾನಸಿಕ ರೋಗಗಳು ಗುಣವಾಗುತ್ತವೆ.

ಉಗಿಯ ಸ್ನಾನಕ್ಕಾಗಿಯೇ ವಿಶೇಷವಾಗಿ ತಯಾರಿಸಿದ ಪೆಟ್ಟಿಗೆಯಲ್ಲಿ ರೋಗಿಯನ್ನು ರುಂಡವು ಹೊರಗಿರುವಂತೆ ಕೂರಿಸಬೇಕು. ರೋಗಿಯು ಬೆತ್ತಲಾಗಿರಬೇಕು ನಂತರ ಕೆಳಗಿನಿಂದ ಉಗಿಯನ್ನು ಬಿಡಬೇಕು. ರೋಗಿಯು ತಲೆಯನ್ನು ಒಂದು ಒದ್ದೆ ಬಟ್ಟೆಯಿಂದ ಸುತ್ತಿಕೊಳ್ಳುವುದು ಉತ್ತಮ. ಈ ಸ್ನಾನವನ್ನು ೧೦-೧೫ ನಿಮಿಷದವರೆಗೆ ಮಾಡುವುದರಿಂದ ಚರ್ಮವು ಶುದ್ಧವಾಗಿ, ಹೊಳಪುಗೊಳ್ಳುತ್ತದೆ. ಹೆಚ್ಚಿನ ಕೊಬ್ಬು ಕರಗುತ್ತದೆ. ರಕ್ತಪರಿಚಲನೆಯು ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತದೆ. ಅನೇಕರೀತಿಯ ಚರ್ಮ ರೋಗಗಳು ವಾಸಿಯಾಗುತ್ತದೆ. ಶೀತ, ನೆಗಡಿ, ಕೆಮ್ಮು ಗೂರಲು ಮೊದಲಾದ ರೋಗಗಳು ಗುಣವಾಗುತ್ತವೆ.

ಪಾದ ಸ್ನಾನ ಚಿಕಿತ್ಸೆಯಲ್ಲಿ ಒಂದು ಸಣ್ಣ ತೊಟ್ಟಿಯಲ್ಲಿ ಬಿಸಿ ನೀರನ್ನು ತುಂಬಿ ಅದರಲ್ಲಿ ಪಾದಗಳನ್ನು ಮುಳುಗಿಸಿ. ಮೈತುಂಬ ಎಣ್ಣೆಯ ರಗ್ಗನ್ನು ಹೊದ್ದುಕೊಂಡು ತಲೆಯ ಮೇಲೆ ಒದ್ದೆ ಬಟ್ಟೆಯನ್ನು ಸುತ್ತಿಕೊಂಡು ಸುಮಾರು ೧೦ - ೧೫ ನಿಮಿಷಗಳವರೆಗೆ ಕೆಲವು ದಿನಗಳವರೆಗೆ ಈ ಚಿಕಿತ್ಸೆ ಮಾಡುವುದರಿಂದ ಕೀಲು ನೋವು, ನೆಗಡಿ, ಕೆಮ್ಮು ಆಗಾಗ ಬರುವ ತಲೆ ನೋವುಗಳು ವಾಸಿಯಾಗುತ್ತವೆ. ಗಾಳಿಯಿಂದ ಚಿಕಿತ್ಸೆಯನ್ನು ಪ್ರಾಣಾಯಾಮದಲ್ಲಿ ನಡೆಸುತ್ತಾರೆ.

**ಸೂರ್ಯನ ಕಿರಣಗಳಿಂದ ಚಿಕಿತ್ಸೆ.**

ಈ ಚಿಕಿತ್ಸೆಯನ್ನು ಸಾಮಾನ್ಯವಾಗಿ ಮೂರು ರೀತಿಯಲ್ಲಿ ಮಾಡುತ್ತಾರೆ, ಅವು - 1. ಸೂರ್ಯ ಸ್ನಾನ, 2. ಸೂರ್ಯನ ಬಣ್ಣದ ಕಿರಣಗಳ ಸ್ನಾನ ಮತ್ತು 3. ಸೂರ್ಯಕಿರಣದಲ್ಲಿರುವ ಕೆಂಪು, ನೀಲಿ, ಹಳದಿ ಕಿರಣಗಳಿಂದ ಔಷಧ ಮತ್ತು ದ್ರವಗಳನ್ನು ತಯಾರಿಸಿ ಸೇವಿಸುವುದು.

ವಿವಸ್ತ್ರರಾಗಿ ದೇಹವನ್ನು ಎಳ್ಳೆಣ್ಣೆಯಿಂದ ಉಜ್ಜಿ, ತಲೆಗೆ ಒಂದು ವಸ್ತ್ರವನ್ನು ಸುತ್ತಿ ಸೂರ್ಯೋದಯದ ಸಮಯದಲ್ಲಿ ಅಥವಾ ಸೂರ್ಯಾಸ್ತದ ಸಮಯದಲ್ಲಿ ದೇಹವನ್ನು ಬಿಸಿಲಿಗೊಡ್ಡಿ ಕುಳಿತುಕೊಳ್ಳುವುದನ್ನೇ ಸೂರ್ಯ ಸ್ನಾನ ( Sun Both ) ವೆನ್ನುತ್ತಾರೆ.

ಈ ರೀತಿಯ ಸೂರ್ಯ ಸ್ನಾನವನ್ನು ಮಾಡುವುದರಿಂದ ಸೂರ್ಯ ಕಿರಣದಲ್ಲಿರುವ 'ಡಿ' ಜೀವಸತ್ವವು

( Vitamine 'D' ) ದೇಹದಿಂದ ಹೀರಲ್ಪಟ್ಟು ರಕ್ತವನ್ನು ಸೇರಿ, ಅವುಗಳ ಮೂಲಕ ಹಲ್ಲು, ಮೂಳೆಗಳಿಗೆ ಸರಬರಾಜು ಆಗಿ ಅವು ದೃಢವಾಗಿಯೂ, ಬಲಯುತವಾಗಿಯೂ ಆಗುತ್ತವೆ. ಮಕ್ಕಳಿಗೆ ಬರುವ 'ರಿಕೆಟ್ಸ್' ಕಾಯಿಲೆಯನ್ನು ಚಿಕಿತ್ಸೆಯಿಂದ ವಾಸಿಮಾಡಬಹುದು.

ಸೂರ್ಯನಲ್ಲಿರುವ ಕೆಂಪು, ನೀಲಿ, ಹಳದಿ ಬಣ್ಣಗಳಿಂದ ನಾನಾರೀತಿಯ ಔಷಧಿಗಳನ್ನು ತಯಾರಿಸಿ ಹಲವು ರೋಗಗಳನ್ನು ವಾಸಿಮಾಡಬಹುದು.

ನೀಲಿ, ಕೆಂಪು, ಹಳದಿ ಬಣ್ಣದ ಸೀಸೆಗಳಲ್ಲಿ ಮುಕ್ಕಾಲು ಭಾಗದಷ್ಟು ನೀರು ಅಥವಾ ಜೇನು ತುಪ್ಪ ಅಥವಾ ಗ್ಲೂಕೋಸ್ ದ್ರಾವಣವನ್ನು ತುಂಬಿ ಬಿಸಿಲು ಚೆನ್ನಾಗಿ ಬೀಳುವ ಸ್ಥಳದಲ್ಲಿ- ಬಿರಟೆಯನ್ನು ಭದ್ರವಾಗಿ ಮುಚ್ಚಿ, 2 ದಿನಗಳವರೆವಿಗೆ ಇಟ್ಟು ನಂತರ ಕೆಲವು ಶೀಶೆಯಲ್ಲಿನ ದ್ರಾವಣದಿಂದ ಶೀತ- ಅಸ್ತಮ, ಕ್ಷಯ, ಮಲೇರಿಯಾ ಮೊದಲಾದ ರೋಗಗಳನ್ನು ವಾಸಿಮಾಡಲು ಉಪಯೋಗಿಸಬಹುದು.

ನೀಲಿ ಶೀಶೆಯಲ್ಲಿನ ದ್ರಾವಣದಿಂದ ಉಷ್ಣ ರೋಗಗಳನ್ನು ( ಕಣ್ಣು ಉರಿಯುವುದು, ಕಾಲು ಉರಿ, ಎದೆ ಉರಿ, ಬಾಯಿಯಲ್ಲಿ ಗುಳ್ಳೆಯಾಗುವುದು, ಮೂಗಿನಲ್ಲಿ ರಕ್ತ ಬರುವುದು ಜ್ವರ ಮೊದಲಾದುವು ) ವಾಸಿಯಾಗಲು ಉಪಯೋಗಿಸಬಹುದು.

ಹಳದಿ ಶೀಶೆಯಲ್ಲಿನ ದ್ರಾವಣದಿಂದ ರಕ್ತ ಕೆಡುವುದು, ಮಲಬದ್ಧತೆ ಮೊದಲಾದವುಗಳನ್ನು ಗುಣಪಡಿಸಬಹುದು

## ಆಕಾಶ ಚಿಕಿತ್ಸೆ

ಆಕಾಶ ಚಿಕಿತ್ಸೆಯೆಂದರೆ ಶುಷ್ಕಚಿಕಿತ್ಸೆ ಎಂದು ಅರ್ಥ. ಇಲ್ಲಿ ನೀರು, ಮಣ್ಣು, ಗಾಳಿ, ಸೂರ್ಯ ಕಿರಣ ಯಾವುದನ್ನೂ ಉಪಯೋಗಸುವುದಿಲ್ಲ ಉಪವಾಸ ಚಿಕಿತ್ಸೆಯು ಆಕಾಶ ಚಿಕಿತ್ಸೆಯ ಪ್ರಮುಖ ಅಂಗ.

ಯೋಗಾಸನಗಳನ್ನು ಮಾಡುವುದರಿಂದ ಅನೇಕ ದೈಹಿಕ, ಮಾನಸಿಕ ರೋಗಗಳು ಗುಣಹೊಂದುತ್ತವೆ. ಇದಕ್ಕೆ ಒಂದು ನಿದರ್ಶನವಾಗಿ ನನಗೆ ಕೆಲವು ದಿನಗಳ ಹಿಂದೆ ಬೆನ್ನು ನೋವು ವಿಪರೀತವಾಗಿ ಭಾದಿಸುತ್ತಿತ್ತು. ಡಾಕ್ಟರಲ್ಲಿಗೆ ಹೋಗಿ ೫-೬ ಚುಚ್ಚು ಮದ್ದು ತೆಗೆದುಕೊಂಡರೂ ಗುಣ ಕಂಡು ಬರಲಿಲ್ಲ. ಆಗ ಧಾರವಾಡದ ನಿಸರ್ಗಚಿಕಿತ್ಸಾ ತಂಡದ ಬೆಂಗಳೂರಿನ ಕ್ಯಾಂಪಿನವರೊಬ್ಬರು ಸರ್ವಾಂಗಾಸನ ಮಾಡಲು ಹೇಳಿದರು. ಅವರು ಹೇಳಿದಂತೆ ನಾನು ಸುಮಾರು 2 ವಾರಗಳಲ್ಲಿ ಬೆನ್ನು ನೋವಿನ ಬಾಧೆಯನ್ನು ಆಶ್ಚರ್ಯಕರ ರೀತಿಯಲ್ಲಿ ಕಳೆದುಕೊಂಡು ಆರೋಗ್ಯವಾಗಿದ್ದೇನೆ.

ಸರಕಾರ ಮತ್ತು ಜನತೆ ಈ ಚಿಕಿತ್ಸಾವಿಧಾನಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರೆ ಇದೂ ಸಹ ಒಂದು ಅದ್ಭುತ ಚಿಕಿತ್ಸಾ ವಿಧಾನವಾಗುವುದರಲ್ಲಿ ಸಂಶಯವಿಲ್ಲ.

---

## ಸರ್ವಜ್ಞ

## ಸಾಲ

—ಎಸ್. ಜಿ. ದಯಾಶಂಕರ್—

ಸರ್ವರಲ್ಲೂ ಮೂಡಿ ಬರಬೇಕು ಧಾರ್ಮಿಕ ಪ್ರಜ್ಞೆ
ಇದು ಸರ್ವಶಕ್ತ ಭಗವಂತನ ಮಾರ್ಮಿಕ ಆಜ್ಞೆ
ಇದನ್ನು ಜೀವನದಲ್ಲಿ ರೂಢಿಸಿಕೊಂಡವನೇ ತಜ್ಞ
ಇದರ ಸಾರವನು ಸರ್ವಗರಿೂ ತಿಳಿಸುವನೇ ಸರ್ವಜ್ಞ.

ಭಾರತೀಯನಾದಮೇಲೆ ಇರಲೇಬೇಕು ಸಾಲ
ಇದಿಲ್ಲದಿದ್ದರೆ ನಡೆಯದೆಂದಿಗೂ ಇವನ ಜಾಲ
ಭಾರತದಲ್ಲೆಲ್ಲೂ ಸಿಗುವುದಿಲ್ಲ ಸಾಲವಿಲ್ಲದ ಕುಲ
ಬರುವುದಿಲ್ಲ ಎಂದೆಂದಿಗೂ ನೀನು ಬದುಕುವ ಕಾಲ.

# ಹಸ್ತಾಕ್ಷರಕ್ಕೆ ಏಳೂವರೆ ಲಕ್ಷ !

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಜಗದ್ವಿಖ್ಯಾತ ಮಹಾ ಪುರುಷರ ಹಸ್ತಾಕ್ಷರಗಳಿಗೆ ಒಂದು ಬಗೆಯ ಶ್ರೀಮಂತಿಕೆ ಭಾವನೆಬಂದು ಅವು ಬಹು ಬೆಲೆಬಾಳುತ್ತವೆ. ಇತಿಹಾಸ ಪ್ರಸಿದ್ಧರಾದ ರಾಜನೀತಿಜ್ಞರು, ಗ್ರಂಥಕಾರರು, ಶಿಲ್ಪ ಮತ್ತು ಚಿತ್ರಕಾರರು, ನಟನಟಿಯರು ಮುಂತಾದವರ ಹಸ್ತಾಕ್ಷರ ಪತ್ರಗಳನ್ನು ಪಡೆಯಲು ತವಕಿಸುವ ಹಸ್ತಾಕ್ಷರ ಸಂಗ್ರಾಹಕರು ಮಾರಾಟ ಅಥವಾ ಹರಾಜಿನಲ್ಲಿ ವಿಪರೀತ ಬೆಲೆ ಕೊಟ್ಟಾದರೂ ಕೊಂಡುಕೊಳ್ಳುತ್ತಾರೆ. ವ್ಯಕ್ತಿಯ ಸ್ಥಾನಮಾನ ಹೆಚ್ಚಿದಷ್ಟೂ ಅವನ ಹಸ್ತಾಕ್ಷರ ಬಯಸುವವರ ಸಂಖ್ಯೆ ಹೆಚ್ಚುತ್ತದೆ; ದಸ್ಕತ್ತು ಅಪೂರ್ವವಾದಷ್ಟು ಅದರ ಬೆಲೆಯೂ ಏರುತ್ತದೆ; ಹಸ್ತಾಕ್ಷರದ ಪತ್ರ ಹಳೆಯದಾದಷ್ಟೂ ಅದರ ಮೌಲ್ಯವೂ ವರ್ಧಿಸುತ್ತದೆ: ವ್ಯಕ್ತಿ ಪ್ರಸಿದ್ಧನಾದಷ್ಟೂ ಅವನ ಕೈಬರಹಕ್ಕೆ, ಸಹಿಗೆ ಬೆಲೆ ಹೆಚ್ಚು.

ವಿನ್‌ಸ್ಟನ್ ಚರ್ಚಿಲ್ಲರು ತಮ್ಮ ಜೀವಮಾನ ಕಾಲದಲ್ಲಿ ಸಹಸ್ರಾರು ಕಾಗದ ಪತ್ರಗಳನ್ನು ಬರೆದಿದ್ದರು. ಅವುಗಳಲ್ಲಿ ಅನೇಕ ಕಾಗದಗಳನ್ನು ಅಪರಿಚಿತರಿಗೂ ಕೂಡ ರಾಜನೀತಿ, ಲಲಿತಕಲೆ, ಯುದ್ಧ, ವಾಣಿಜ್ಯ ಸಂಘ ಮುಂತಾದ ಬಗೆಬಗೆಯ ವಿಷಯಗಳ ಸಂಬಂಧದಲ್ಲಿ ಬರೆದಿದ್ದರು. ಅವರ ಹಸ್ತಾಕ್ಷರವಿರುವ ಕಾಗದಪತ್ರಗಳು ಯಾರ ಬಳಿಯಲ್ಲಿದ್ದರೂ ಇಂದು ಅವುಗಳ ಮಾರಾಟದಿಂದ ನೂರಾರು ಪೌಂಡುಗಳು ದೊರೆಯುವವು. ಅವರ ಸಹಿ ಇರುವ ಕಾಗದಗಳಿಗೂ ಬಹಳ ಬೆಲೆ ಇದೆ.

ಚರ್ಚಿಲ್ 17ನೇ ವರ್ಷ ವಯಸ್ಸಿನಲ್ಲಿ ಬ್ರ್ಯಟನ್ ಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದಾಗ ಆ ಶಾಲೆಯ ವಿಷಯದಲ್ಲಿ ಚೆಸ್ಟರ್ ಡಾಸನ್ ಎಂಬುವವನಿಗೆ ಬರೆದಿದ್ದ ಒಂದು ಪತ್ರವು ಆರು ವರ್ಷಗಳ ಹಿಂದೆ 450 ಡಾಲರ್‌ಗಳಿಗೆ ಮಾರಲ್ಪಟ್ಟಿತು. ಚರ್ಚಿಲ್ಲರು ಉದ್ಯೋಗದಲ್ಲಿದ್ದ ಹುಸ್ಸಾರ್ ರೆಜಿಮೆಂಟಿನ ನೋಟ್‌ಪೇಪರ್ ಮೇಲೆ "ಅವರ್ ಮಾಡರ್ನ್ ವಾಚ್‌ವರ್ಡ್" ಎಂಬ ಒಂದು ಪದ್ಯದ ಕೆಳಗೆ ಮಾಡಿದ್ದ ಸಹಿಯು 500 ಪೌಂಡುಗಳನ್ನು ತಂದಿತು. ಬೋಯರ್ ಯುದ್ಧಕಾಲದಲ್ಲಿ ಅವರು 1899ರಲ್ಲಿ ಯುದ್ಧ ಕೈದಿಗಳ ಠಾಣ್ಯದಲ್ಲಿ ಶತ್ರುಗಳ ಸೆರೆಯಾಳಾಗಿದ್ದಾಗ ಅಲಿಸ್ಟರ್ ಕ್ಯಾಂಬೆಲ್ ಎಂಬುವನಿಗೆ ಬರೆದಿದ್ದ ಪತ್ರವು 750 ಪೌಂಡುಗಳನ್ನು ತಂದಿತು. ಚರ್ಚಿಲರಿಗೆ ಗಾರೆ ಕೆಲಸದಲ್ಲಿ ಅಭಿರುಚಿಯಿತ್ತು. ಅವರು "ಅಮಾಲ್ಗಮೇಟೆಡ್ ಯೂನಿಯನ್ ಆಫ್ ಬಿಲ್ಡಿಂಗ್ ಟ್ರೇಡ್ ವರ್ಕ್ಸ್" ಎಂಬ ಸಂಸ್ಥೆಯಲ್ಲಿ ಸದಸ್ಯರಾಗಲು ಅದರ ಕಾರ್ಯದರ್ಶಿಗೆ ಬರೆದುಕೊಂಡಿದ್ದ ಅರ್ಜಿ 420 ಪೌಂಡುಗಳಿಗೆ ಮಾರಲ್ಪಟ್ಟಿತು.

ಬಟನ್ ಗ್ವಿನ್ನೆಟ್ ಎಂಬ ಅಮೆರಿಕನ್ನನು 1770ರಲ್ಲಿ ತನ್ನ ಉಯಿಲಿನ ಮೇಲೆ ಮಾಡಿದ್ದ ಪ್ರತಿ ಅಕ್ಷರಕ್ಕೂ ಓರ್ವ ಹಸ್ತಾಕ್ಷರ ಸಂಗ್ರಹಕಾರನಿಗೆ 1926 ರಲ್ಲಿ 8000 ರೂಪಾಯಿ ಬೆಲೆ ಸಿಕ್ಕಿತು.

ಪ್ರಖ್ಯಾತ ವ್ಯಕ್ತಿಯ ಸಹಿ ದೊರಕುವುದು ಅಪೂರ್ವವೆನಿಸುವ ಸಂದರ್ಭದಲ್ಲಿ ಆ ಸಹಿಗೆ ಬಹು ವಿಶಿಷ್ಟ ಬೆಲೆ ಬರುತ್ತದೆ. ಅಪೂರ್ವ ಗ್ರಂಥಗಳ ವಿಷಯದಲ್ಲಿ ಜಗತ್ತಿನ ತಜ್ಞರುಗಳಲ್ಲಿ ಅತ್ಯಂತ ಶ್ರೇಷ್ಠನೆಂದು ಗಣಿಸಲ್ಪಟ್ಟಿದ್ದ ಡಾ॥ ರೋಜಿನಾ ಬಾಕ್ ಎಂಬಾತ ಬಟನ್ ಗ್ವಿನ್ನೆಟ್ ರುಜು ಹಾಕಿದ್ದ ಒಂದು ಕಾಗದಕ್ಕೆ 10,000 ಪೌಂಡುಗಳನ್ನು ಕೊಟ್ಟ.

ಅಮೆರಿಕದ ಕ್ರಾಂತಿ ಕಾಲದಲ್ಲಿ ಅಮೇರಿಕನ್ನರು ಬ್ರಿಟಿಷರ ಮೇಲೆ ಯುದ್ಧಮಾಡಿ ವಿಜಯ ಪಡೆದಮೇಲೆ 1776ನೇ ವರ್ಷದಲ್ಲಿ ಅಮೇರಿಕದ "ಸ್ವಾತಂತ್ರ್ಯ ಘೋಷಣೆ"ಗೆ ರುಜು ಹಾಕಿದವರಲ್ಲಿ ಒಬ್ಬನಾಗಿದ್ದ ಅವನು ಅಮೆರಿಕದ "ರಾಜ್ಯ ಶಾಸನದ ಪಿತಾಮಹ" ಎಂದು ಗಣಿಸಲ್ಪಟ್ಟಿದ್ದಾನೆ. ಅವನು ಇದಕ್ಕೆ ರುಜು ಹಾಕಿದನಂತರ ಒಂದು ದ್ವಂದ್ವ ಯುದ್ಧದಲ್ಲಿ ಮಡಿದ. ಆ ದಸ್ತಾವೇಜಿಗೆ ರುಜು ಹಾಕಿದ್ದ ಇತರರೂ ಪ್ರಖ್ಯಾತರಾಗಿದ್ದರೂ ಗ್ವಿನ್ನೆಟ್ ಮಡಿದಿದ್ದರಿಂದ ಅವನ ಸಹಿ ಬಹು ಅಪರೂಪವಾಯಿತು. ಆದ್ದರಿಂದ ಅವನ ರುಜುವಿಗೆ ಬಹು ಬೆಲೆ ಕೊಡಲಾಯಿತು.

ಒಂದು ಪುಸ್ತಕದ ಹಾಳೆಯಲ್ಲಿ ಒಬ್ಬ ಅಪೂರ್ವ ವ್ಯಕ್ತಿಯು ಅವಸರದಿಂದ ಗೀಚಿದ ಹಸ್ತಾಕ್ಷರವು ಆ ಪುಸ್ತಕದ ಬೆಲೆಯನ್ನು ದ್ವಿಗುಣ, ತ್ರಿಗುಣವಾಗಿ ಏರಿಸಬಲ್ಲದು. ಪಿ. ಜೆ. ಕ್ರಾಫ್ಟ್ ಎಂಬುವನು 1953 ವರ್ಷದಲ್ಲಿ ಒಂದು ಗ್ರಂಥಾಲಯದಲ್ಲಿ ಪುಸ್ತಕಗಳನ್ನು ಪರಿಶೀಲಿಸುತ್ತಿದ್ದಾಗ, ಒಂದು ಗ್ರಂಥದ ಖಾಲಿ ಹಾಳೆಯ ಮೇಲೆ ಯಾರೋ 15ನೇ ಶತಮಾನದಲ್ಲಿ ಗೀಚಿ ಬರೆದಿದ್ದ ಅಕ್ಷರಗಳನ್ನು ಕಂಡ. ಅವನ್ನು ಭೂತಕನ್ನಡಿಯಿಂದ ಭೇದಿಸಲು ಅವು ಇಂಗ್ಲೆಂಡಿನ ರಾಜ ಏಳನೇ ಹೆನ್ರಿಯ ತಾಯಿ ಮಾರ್ಗರೇಟ್ ಬೂಫರ್ಡ್, ಕೌಂಟೆಸ್ ಆಫ್ ರಿಚ್‌ಮಂಡ್ ಎಂಬಾಕೆ ಒಂದು ವಾಕ್ಯವನ್ನು ಗೀಚಿ ಅದಕ್ಕೆ ಸಹಿ ಹಾಕಿದ್ದುದೆಂದು ತಿಳಿದುಬಂತು. ಅದು ವಿನಾ ಆಕೆಯ ಕೈಬರಹವಾಗಲಿ, ರುಜುವಾಗಲಿ ಮತ್ತೆಲ್ಲೂ ಸಿಕ್ಕುತ್ತಿರಲಿಲ್ಲ. ಆಕೆಯ ಹಸ್ತಾಕ್ಷರವಿಲ್ಲದೆ ಬರೀ ಆ ಗ್ರಂಥವನ್ನೇ ಹರಾಜು ಮಾಡಿದ್ದರೂ 3000 ಪೌಂಡ್ ಬೆಲೆ ದೊರೆಯುತ್ತಿತ್ತು. ರಾಜಮಾತೆಯ ಕೈಬರಹವೂ ಇದ್ದದ್ದರಿಂದ ಆ ಗ್ರಂಥದ ಮಾರಾಟದಿಂದ 10,000 ಪೌಂಡುಗಳು ದೊರೆತವು.

ಫೀಲ್ಡಿಂಗ್ ಎಂಬ ಬ್ರಿಟಿಷ್ ಗ್ರಂಥಕಾರನು ಬರೆದಿದ್ದ ಕೆಲವು ಕಾಗದಗಳನ್ನು 700 ಪೌಂಡುಗಳಿಗೆ ಮಾರಲಾಯಿತು. ಇಂಗ್ಲೆಂಡಿನ ಸಾಹಿತಿಗಳಾದ ಹಾರ್ಡೀ, ಕಿಪ್ಲಿಂಗ್, ಬರ್ನಾಡಷಾರವರು ಬರೆದ ಕಾಗದಗಳು ಯಾರ ಬಳಿಯಲ್ಲಾದರೂ ಇದ್ದರೆ ಅವುಗಳಲ್ಲಿ ಪ್ರತಿಯೊಂದಕ್ಕೂ ಕನಿಷ್ಠಪಕ್ಷ 200–300 ಪೌಂಡುಗಳನ್ನು ಪಡೆಯಬಹುದು. ಕಾದಂಬರಿಕಾರ ಚಾರ್ಲ್ಸ್ ಡಿಕನ್ಸ್‌ನ ಕಾಗದದ ಬೆಲೆ ಅದಕ್ಕಿಂತಲೂ ಮೂರು ನಾಲ್ಕರಷ್ಟು ಹೆಚ್ಚು. ಆ ಕಾಗದಗಳು ಹೆಚ್ಚು ಹೆಚ್ಚು ಹಳೆಯದಾದಷ್ಟೂ ಅವುಗಳ ಬೆಲೆಗಳೂ ಹೆಚ್ಚು ಹೆಚ್ಚಾಗುತ್ತವೆ.

ವರ್ಡ್ಸ್‌ವರ್ತ್ ಕವಿಯು ತನ್ನ ಪತ್ನಿಗೆ ಬರೆದ ಪ್ರೇಮಪತ್ರಗಳನ್ನು ಇತ್ತೀಚೆಗೆ ಲಂಡನ್‌ನಲ್ಲಿ ಹರಾಜಿಗೆ ಹಾಕಿದಾಗ ಅವು 5 ಲಕ್ಷ 25 ಸಾವಿರ ರೂಪಾಯಿಗಳಿಗೆ ಮಾರಾಟವಾದವು.

ಕಿಪ್ಲಿಂಗ್ ತನ್ನ ಸೋದರತ್ತೆ ಲೂಯಿಸಾ ಬಾಲ್‌ವಿನ್‌ಗೆ ಕಳುಹಿಸಿದ 9 ಕೈಬರಹದ ಕಾಗದಗಳೂ, ಹಸ್ತಾಕ್ಷರ ಪದ್ಯಗಳೂ ಕ್ರಿಸ್ಟೀ ಅಂಗಡಿಯಲ್ಲಿ 1,000 ಪೌಂಡುಗಳಿಗೆ ಹರಾಜಾದವು. ಅದೇ ಹರಾಜಿನಲ್ಲಿ ಟಿ. ಇ. ಲಾರೆನ್ಸ್, ಡ್ಯೂಕ್ ಆಫ್ ವೆಲ್ಲಿಂಗ್ಟನ್ ಮತ್ತು ಆಲಿವರ್ ಕ್ರಾಂವೆಲ್‌ರು ಬರೆದಿದ್ದ ಕಾಗದಗಳು 9864 ಪೌಂಡುಗಳಿಗೆ ಲಿಲಾವಾದವು. ಅಮೆರಿಕದ ಅಧ್ಯಕ್ಷರಾಗಿದ್ದ ರೂಜ್‌ವೆಲ್ಟ್ ಹಿರಿಯ ನೌಕಾಧಿಕಾರಿಗಳ ಹಸ್ತಾಕ್ಷರಗಳನ್ನು ಸಂಗ್ರಹಿಸಿದ್ದರು. "ಆಲಿಸ್ ಇನ್‌ವಂಡರ್ ಲ್ಯಾಂಡ್" ಎಂಬ ಪುಸ್ತಕವನ್ನು ಬರೆದ ಲೂಯಿ ಕೆರ್ರೋಲ್ ಎಂಬಾತನ ಕಾಗದಗಳೂ, ಹಸ್ತಲೇಖಗಳೂ ಬಹು ಬೆಲೆಯನ್ನು ತಂದವು. ಅವನಿಗೂ, ಅವನ ಪುಸ್ತಕಗಳ ಪ್ರಕಾಶಕ ಮ್ಯಾಕ್ಮಿಲನ್‌ಗೂ ನಡೆದಿದ್ದ ಕಾಗದ ಪತ್ರಗಳನ್ನು ಹುಡುಕಿ ತೆಗೆದು ಸೌತ್‌ಬೀ ಅಂಗಡಿಯಲ್ಲಿ ಮಾರಾಟಕ್ಕೆ ಇಟ್ಟಾಗ ನ್ಯೂಯಾರ್ಕಿನ ಜಾನ್ ಫ್ಲೆಮಿಂಗ್ ಎಂಬಾತ ಅವುಗಳನ್ನು 3200 ಪೌಂಡು ಕೊಟ್ಟು ಕೊಂಡುಕೊಂಡ. ಅಸಾಮಾನ್ಯ ವ್ಯಕ್ತಿಯಾಗಿದ್ದ ಕೆರ್ರೋಲ್‌ನ ಇನ್ನೂ ಅನೇಕ ಕಾಗದಗಳು ಹೊರಬಂದಿಲ್ಲ. ಅವು ಬೆಳಕಿಗೆ ಬಂದರೆ ಬಹು ಬೆಲೆ ದೊರೆಯುವುದು.

ಬರ್ನಾರ್ಡ್ ಷಾನಾ ಕಾಗದಗಳಿಗೆ ಅತನ ಜೀವಮಾನ ಕಾಲದಲ್ಲೇ ಬಹಳ ಬೆಲೆಗಳಿದ್ದವು, ಅದು ಆತನಿಗೆ ಗೊತ್ತಿದ್ದುದರಿಂದ ಆತ ಸಾಮಾನ್ಯವಾಗಿ ಅಪರಿಚಿತರಿಗೆ ಕಾಗದ ಬರೆಯುತ್ತಿರಲಿಲ್ಲ. ತನಗೆ ಬೇಕಾಗಿದ್ದ ಕೆಲವು ಸ್ತ್ರೀಯರೊಡನೆ ಬಹಳ ಕಾಗದ ಪತ್ರಗಳನ್ನು ನಡೆಸಿದ್ದ. 1951 ರಿಂದ 1945 ರವರೆಗೆ ಆತ ಅಮೆರಿಕದ ಮೋಲೀ ಟಾಕಿನ್ಸ್ ಎಂಬ ನಟಿಗೆ 125 ಕಾಗದಗಳನ್ನು ಬರೆದಿದ್ದ. ಕ್ಲಾರ್ಕ್‌ಸನ್ ಪಾಟರ್ ಎಂಬಾತ ಆ ಕಾಗದಗಳನ್ನೆಲ್ಲಾ "ಒಬ್ಬ ತರುಣ ನಟಿಗೆ" ಎಂಬ ಗ್ರಂಥರೂಪದಲ್ಲಿ ಪ್ರಕಟಿಸಿದ, ಅದಕ್ಕೆ 9,000 ಪೌಂಡು ಬೆಲೆ ದೊರೆಯಿತು. ಆದರೆ ಆಕೆ ಬರೆದಿದ್ದ 1,000 ಕಾಗದಗಳಿಗೆ ಯಾವ ಬೆಲೆಯೂ ಇರಲಿಲ್ಲ.

ಕತ್ತಲ ಕೋಣೆಗಳಲ್ಲಿ ಬಹುಕಾಲ ತೆರೆಯದ ಹಳೆಯ ಪೆಟ್ಟಿಗೆಗಳಲ್ಲಿ ಹುದುಗಿರುವ ಕಾಗದ, ಡೈರಿಗಳನ್ನು ತೆಗೆದು ಹುಡುಕಿದಾಗ ಒಮ್ಮೊಮ್ಮೆ ಅವು ಎಷ್ಟು ಅಮೋಘ ನಿಧಿಎಂಬುದು ಅರಿವಾಗುತ್ತದೆ. ಇತ್ತೀಚೆಗೆ ಚಿತ್ರಕಾರ ಪೀಟರನ 45 ಪರಂಪರೆಯ ಕಾಗದಗಳೂ, ಶಿಲ್ಪಕಾರ ಜಾನ್‌ಕಾನ್ ಸ್ಟೇಬಲನ ಮೂರು ಪತ್ರಗಳೂ

19ನೇ ಶತಮಾನದ 2,000 ಸಾವಿರ ಅಪೂರ್ವ ದಸ್ತಾವೇಜುಗಳೂ ಸಿಕ್ಕಿದವು. ಅವುಗಳಿಂದ ಸಹಸ್ರಾರು ಪೌಂಡುಗಳ ಬೆಲೆ ದೊಂಯುವುದು.

ಲಿಂಡನ್ ಜಾನ್ಸನ್ ಅಮೆರಿಕದ ಅಧ್ಯಕ್ಷರಾಗಿದ್ದಾಗ ಬರೆದ ಪತ್ರವೊಂದು ಹಸ್ತಾಕ್ಷರ ನಿಪುಣನೊಬ್ಬ ಲಿಲಾವು ಮಾಡಿದಾಗ 1875 ರೂಪಾಯಿಗಳಿಗೆ ಅದನ್ನು ಲಂಡನ್ನಿನಲ್ಲಿ ಹರಾಜುಮಾಡಿದಾಗ 16,000 ರೂಪಾಯಿ ಬೆಲೆ ಬಂದಿತು

ಬರೀ ಹಸ್ತಾಕ್ಷರಕ್ಕಿಂತ ಹಸ್ತಾಕ್ಷರ ಇರುವ ಪತ್ರದ ಮುಖ್ಯ ತತ್ವಕ್ಕನುಗುಣವಾಗಿ ಅದರ ಬೆಲೆ ಹೆಚ್ಚುತ್ತದೆ. ಪ್ರತಿವರ್ಷ ಹಸ್ತಾಕ್ಷರಗಳ ಹರಾಜು ಮತ್ತು ಖಾಸಗಿ ಮಾರಾಟದಿಂದ 10 ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚಿನ ವ್ಯವಹಾರ ನಡೆಯುತ್ತದೆ. ಭಾರಿ ಬೆಲೆಯ ಹಸ್ತಾಕ್ಷರಗಳಿಗೆ ಸೊಗಸಾದ ಚೌಕಟ್ಟು ಹಾಕಿಸಿ ಪ್ರದರ್ಶಿಸುವುದು ವಾಡಿಕೆಯಲ್ಲಿದೆ. ಅಮೆರಿಕದ ಒಂದು ಸಂಸ್ಥೆಯಲ್ಲಿ ಎರಡು ಕೋಟಿ ರೂಪಾಯಿಗಳಿಗಿಂತಲೂ ಹೆಚ್ಚು ಮೌಲ್ಯದ ಹಸ್ತಾಕ್ಷರಗಳಿವೆ. ಷೇಕ್ಸ್‌ಪೀಯರ್, ನೆಪೋಲಿಯನ್, ಹಿಟ್ಲರ್, ಮಹಾತ್ಮ ಗಾಂಧಿ ಮುಂತಾದವರ ಹಸ್ತಾಕ್ಷರಗಳೂ ಇವೆ. ಕೊಲಂಬಸನ ಸಹಿ ಇರುವ ಕಾಗದದ ಬೆಲೆ 5 ಲಕ್ಷ ರೂಪಾಯಿಗಳು ಷೇಕ್ಸ್‌ಸ್ಪಿಯರ್‌ನ ಹಸ್ತಾಕ್ಷರದ ಬೆಲೆ 7⅓ ಲಕ್ಷ ರೂಪಾಯಿಗಳು.

ಹಸ್ತಾಕ್ಷರ ಮಾರಾಟವನ್ನು ಪ್ರತಿಭಟಿಸುವ ಕೆಲವರು ಹಸ್ತಾಕ್ಷರ ಸಂಗ್ರಾಹಕರಿಗೆ ತಮ್ಮ ಹಸ್ತಾಕ್ಷರವನ್ನು ಕೊಡಲು ಒಪ್ಪುವುದಿಲ್ಲ, ಅಂಥವರಿಗೆ ಅಂಚೆಯಲ್ಲಿ ರಿಜಿಸ್ಟರ್ಡ್ ಪತ್ರ ಕಳುಹಿಸಿ ತಲಸಿದ್ದಕ್ಕೆ ಪಾವತಿ ಸಹಿಯನ್ನು ಪಡೆಯುವ ಉಪಾಯ ಮಾಡಲಾಗುತ್ತದೆ. ಲಂಡನಿನ ಒಂದು ಹಳೇ ಪುಸ್ತಕದ ಅಂಗಡಿಯವರು ಒಂದು ಪುಸ್ತಕವನ್ನು 1848 ರಲ್ಲಿ 50 ಶಿಲಿಂಗ್‌ಗಳಿಗೆ ಕೊಂಡುಕೊಂಡಿದ್ದರು. 1964 ರಲ್ಲಿ ಅದನ್ನು ಪರೀಕ್ಷಿಸಿದಾಗ ಅದರಲ್ಲಿ ರಾಬರ್ಟ್ ಹೆರಿಕ್ ಎಂಬ ಬಹು ಪ್ರಸಿದ್ಧ ಕವಿಯ ಅಕ್ಷರಗಳಿದ್ದುದು ತಿಳಿದು ಅದೇ ಪುಸ್ತಕವನ್ನು ಹರಾಜಿಗೆ ಹಾಕಿದಾಗ 34,000 ಪೌಂಡುಗಳು ದೊರಕಿದವು. ಸ್ಯಾಮ್ಯುಎಲ್ ಟೇಲರ್ ಕೋಲ್ ರಿಜ್ಜನು 1796 ತನ್ನ ಕೈಯಿಂದ ತನ್ನ ಪ್ರಕಾಶಕನಿಗಾಗಿ ಮಾಡಿದ್ದ ಹಸ್ತಲೇಖನವನ್ನು 1967 ರಲ್ಲಿ ಒಬ್ಬ ಅಮೆರಿಕನ್ನನು 17,000 ಪೌಂಡುಗಳಿಗೆ ಕೊಂಡು ಕೊಂಡ. 1480 ರಲ್ಲಿ ಕ್ಯಾಕ್ಸ್‌ಟನ್ನನು ನಕಲುಮಾಡಿದ್ದ "Metamorphoes" ಎಂಬುದನ್ನು ಒಬ್ಬ ಅಮೆರಿಕದ ವ್ಯಾಪರಸ್ಥ 90,000 ಪೌಂಡುಗಳಿಗೆ ಖರೀದಿಸಿದ ನೆಲ್ಸನ್ನನು 1805 ರಲ್ಲಿ ತಾನು ಹಡಗಿನಲ್ಲಿ ಮರಣಶಯ್ಯೆಯಲ್ಲಿ ತನ್ನ ಎಡಗೈಯಿಂದ ಲೇಡಿ ಹ್ಯಾಮಿಟನ್ನಳಿಗೆ ರದ್ದಿ ಕಾಗದದ ಮೇಲೆ ಬರೆದಿದ್ದ ಕೊನೆಯ ಕಾಗದವು ಮಾರಾಟವಾಗಿ ಈಗ ಬ್ರಿಟಿಷ್ ಮ್ಯೂಜಿಯಂನಲ್ಲಿದೆ.

---

## ಪ್ರೇಮದ ಗುಟ್ಟು

## ಪಶ್ಚಾತ್ತಾಪ

— ಕೆ. ವಿರೂಪಾಕ್ಷಗೌಡ —

ಪ್ರಕಟನೆ, ಕೋರಿಕೆ, ಪ್ರೆಮುಕು ಬೇಕೇ ?
ಬರಹದಿ ಕೆದಡದಿರಿ ಸ್ಥಾನ
ನೆರೆಮನೆ ಗೆಳತಿಯ ಗಂಡನ ನೋಡಿರಿ
ಭಕ್ತಿಯು ಒಳಗೇಲೀನ.

ಅದು ಬೇಕು ಇದು ಬೇಕು ಕೈಯಕಟ್ಟಿಸಿಕೊಂಡು
ಜೇನು ತುಪ್ಪದಿ ಬಿಲ್ಲತೆಂದಿ ನಾನು
ಅಂತರಂಗದಿ ಮಾತ್ರ ಇಚ್ಛೇಚೆಗೆ
ಬುದ್ಧ ಬಸವನ ಬಾಳು ಬಹು ಮೆಚ್ಚಿಗೆ.

ಶ್ರೀ ಸಿದ್ಧಲಿಂಗೇಶ್ವರ ಸ್ವಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ

LICENCED TO POST WITHOUT PRE PAYMENT LICENCE NO. 3
Registred with theRegistrar of News papers for India under No. 17139/6
Reg No. KRN Q-